for advertisement. Rate Rs. 15/- (per insertion.)

# ANTARANGA

**KANARESE WEEKLY MAGAZINE**

PROPRIETORS:
SUPPLY AGENCY LIMITED, UDIPI.
PRINTED AT THE
MANIPAL POWER PRESS, UDIPI.

# ಅಂತರಂಗ

ಕನ್ನಡ ವಾರ ಪತ್ರಿಕೆ -- ಉಡುಪಿ

ವರ್ಷ ೧ ] ✠ [ ಸಂಚಿಕೆ ೨೦

ಆದಿತ್ಯವಾರ, ದಶಂಬರ ೪, -'೩೮





**ವಾರ್ಷಿಕ ಚಂದಾ: ಮೂರು ರೂಪಾಯಿ.**
**ಬಿಡಿ ಸಂಚಿಕೆ: ಒಂದಾಣೆ**

**ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.**

# ಅಂತರಂಗ

## ಸಿ ಪಿ - ಕ ಪಿ

### ಸ್ವದೇಶೀ ಕುದುರೆ ಜೂಜು!

ಬೇಲಿಯೇ ಪೈರು ತಿನ್ನತೊಡಗಿರುವುದರಿಂದ ಪರಿಸ್ಥಿತಿಯು ಕಠಿನವಾಗಿದೆ. ಕಾಂಗ್ರೆಸ್ ಮಂತ್ರಿಗಳಾದ ಡಾ। ಪಿ. ಸುಬ್ಬರಾಯನರು ಮದ್ರಾಸಿನ ಕುದುರೆಜೂಜು ಕ್ಲಬ್ಬಿನ ಅಧ್ಯಕ್ಷತೆಯ ಹೊಣೆಗಾರಿಕೆಯನ್ನು ಇನ್ನೂ ಹೊರತ್ತುಲಿದ್ದಾರೆ. ಕುದುರೆ ಜೂಜನ್ನು ನಿಲ್ಲಿಸಬೇಕೆಂದು ಕಾಂಗ್ರೆಸ್ ಜನರು ಹೇಳುವುದಿದ್ದರೂ ಮಾನ್ಯ ಮಂತ್ರಿಗಳು ಅವೆಲ್ಲವನ್ನು ಲಕ್ಷಿಸದೆ ಬೇಡವಾದೊಂದು ವಿಷಯವನ್ನು ಸಮರ್ಥಿಸುತ್ತಿರುವುದು ಆಶ್ಚರ್ಯ. "ಇಂಡಿಯನ್ ಎಕ್ಸ್ ಪ್ರೆಸ್" ಎಂಬ ಕಾಂಗ್ರೆಸ್ ಧ್ಯೇಯದ ದಿನಪತ್ರಿಕೆಯು ಈ ಕುರಿತು ದೊಡ್ಡ ಪ್ರಚಾರವನ್ನು ಕೈಗೊಂಡಿದೆ. ವಸ್ತುಸ್ಥಿತಿಯು ಹೀಗಿದ್ದರೂ ಡಾ। ಸುಬ್ಬರಾಯನರು ತನ್ನ ಅಧ್ಯಕ್ಷತೆಯು "ಆಕ್ಷೇಪಣಾರ್ಹ"ವಾದುದಲ್ಲವೆಂದು ರಾಜಾಜಿಯವರು ಪಟ್ಟ ಅಭಿಪ್ರಾಯವನ್ನು ಮಂಗಳೂರು ಮೈದಾನಿನಲ್ಲಿ ಉದಾಹರಿಸಿರುವುದು ನಿಜವಾಗಿಯೂ ಶೋಚನೀಯವಾಗಿದೆ. ಬಡವರು ಜುಗಾರಿ ಆಡಬಾರದೆಂಬ ನಿಯಮವಿದ್ದರೂ, ಅಧಿಕಾರಸ್ಥಾನದಲ್ಲಿರುವವರು ಸುಧಾರಿತ ಜೂಜನ್ನು ಸಮರ್ಥಿಸುವುದು ಯಾವ ನ್ಯಾಯ? ಪ್ರಾಯಶಃ ಸ್ವದೇಶೀ ಕ್ರಿಮಿನಲ್ ಲಾ ಎಮೆಂಡ್‌ಮೆಂಟ್ ಆಕ್ಟನ್ನು ಸಮರ್ಥಿಸಿದಂತೆ ರಾಜಾಜಿಯವರು 'ಸ್ವದೇಶೀ ಕುದುರೆಯ ಜೂಜ'ನ್ನು ಸಮರ್ಥಿಸಿರಬಹುದೇ? ಹೇಗಿದ್ದರೂ ಕುದುರೆ ಜೂಜನ್ನು ಸಮರ್ಥಿಸುವುದು ಕಾಂಗ್ರೆಸ್ ಸಂಸ್ಥೆಯ ಪ್ರತಿನಿಧಿಗಳಿಗೆ ಹೇಳಿಸಿರುವುದಲ್ಲವೆಂಬುದರಲ್ಲಿ ಎರಡಭಿಪ್ರಾಯವಿದೆಯೆ?

ಂ೦ಂ

### ಪತ್ರಿಕಾ ಧರ್ಮ!

ದಕ್ಷಿಣ ಕನ್ನಡದ ಪತ್ರಿಕೋದ್ಯಮದ ಚರಿತ್ರೆಯಲ್ಲಿ 'ಸ್ವರ್ಣಾಕ್ಷರ'ಗಳಿಂದ ಬರೆದಿಡಬೇಕಾದ ಒಂದು 'ಆಂದೋಲನವು' ಪ್ರಾರಂಭವಾಗಿದೆ. ಅದು ಮತ್ತಾವುದೂ ಅಲ್ಲ. ಪತ್ರಿಕಾ ಧರ್ಮದ ಕುರಿತು ಮಹತ್ವದ ಚರ್ಚೆ. ತಮ್ಮನ್ನು ಹೊಗಳುವುದಕ್ಕಾಗಿ ವಿವಿಧ ರೀತಿಗಳಿಂದ ಲಂಚಕೊಟ್ಟು ಪತ್ರಿಕೆಗಳನ್ನು ಕೊಂಡುಕೊಳ್ಳುವ ಧುರೀಣರು ದ. ಕನ್ನಡದಲ್ಲಿ ಅನೇಕರಿದ್ದಾರೆ. ಇಂತಹ ಪತ್ರಿಕೆಗಳ 'ಧರ್ಮ' ಹೇಗಿರಬಹುದೆಂಬುದು ಸ್ವಯಂವ್ಯಕ್ತ. ಎಲ್ಲಾ ವಿಧದ ಸ್ವಾತಂತ್ರ್ಯಗಳಿರಬೇಕೆಂದು ಉದ್ದುದ್ದ ಭಾಷಣ ಕೊಡುವವರು ಕೂಡಾ ಅದನ್ನು ಕಾರ್ಯತಃ ಮನ್ನಿಸುವುದಿಲ್ಲ. ನಿರ್ಭೀತಿ, ನಿರ್ದಾಕ್ಷಿಣ್ಯ ಮನೋವೃತ್ತಿಯ ಪತ್ರಿಕೆಗಳೆಂದು ಹೇಳು

### ವಿಚಿತ್ರ ಪ್ರಚಾರ



ಎಬಿಸೀನಿಯದಲ್ಲಿ ಬಿಳಿಜನರು ಕಡಿಮೆಯಾದುದರಿಂದ ಮುಸ್ಸೋಲಿನಿಯು ಇಟಲಿಯಲ್ಲಿ ನವೀನವಾದೊಂದು ಪ್ರಚಾರವನ್ನು ತೊಡಗಿದ್ದಾನೆ. 'ಎಬಿಸೀನಿಯದಲ್ಲಿ ವಿವಾಹವು ನಿಮ್ಮನ್ನು ಕಾಯುತ್ತಿದೆ.' ಯೆಂಬುದು ಅಲ್ಲಿಯ ಪ್ರಚಾರದ ಮೂಲ ಮಾತಾಗಿದೆ. ಎಬಿಸೀನಿಯಕ್ಕೆ ಹೋಗುವ ಮೊದಲು ಸ್ತ್ರೀಯರು ಫ್ಯಾಸಿಸ್ಟ್ ಅಧಿಕಾರಿಗಳೊಂದಿಗೆ 'ಡಾನ್ಸ್' ಮಾಡುತ್ತಾರೆ. ಸರ್ವಾಧಿಕಾರಿಯೊಂದಿಗೆ ನರ್ತನದಲ್ಲಿ ಭಾಗವಹಿಸುವ ಸಂದರ್ಭಕ್ಕಾಗಿ ಹಲವು ಇಟಾಲಿಯನ್ ತರುಣಿಯರು ಎಬಿಸೀನಿಯಕ್ಕೆ ಹೋಗುತ್ತಾರೆ. ಚಿತ್ರದಲ್ಲಿ ಇಟಲಿಯ ಸರ್ವಾಧಿಕಾರಿ ಮುಸ್ಸೋಲಿನಿಯು ಓರ್ವ ತರುಣಿಯೊಂದಿಗೆ 'ಡಾನ್ಸ್' ಮಾಡುತ್ತಿದ್ದಾನೆ.

ತ್ತಿರುವ ಕೆಲವು ಪತ್ರಿಕೆಗಳ ಕಾರ್ಯಕರ್ತರು ಆರ್ಥಿಕ ಮುಗ್ಗಟ್ಟಿನ ದೆಸೆಯಿಂದ 'ಒಂದು ಗೇಣು ಹೊಟ್ಟೆ'ಯ ನೆವಹಾಕಿ ಪತ್ರಿಕಾಧರ್ಮದ ಕೊರಳನ್ನು ಕೊಯ್ಯುತ್ತಾ 'ಹಾ, ಪತ್ರಿಕಾಧರ್ಮದ ದುರವಸ್ಥೆಯೇ'ಎಂದು ಮೊಸಳೆಕಣ್ಣೀರು ಸುರಿಸುತ್ತಾರೆ ಜಿಲ್ಲೆಯ ಧುರೀಣರ ಹೇಯ ವಾತಾವರಣದ ಹವಾಮಾನವು ಪತ್ರಿಕಾ ಪ್ರಪಂಚದ ಪರಿಸ್ಥಿತಿಯನ್ನು ವ್ಯತ್ಯಾಸಗೊಳಿಸಿರಬಹುದೆ?

೦೦೦

## ಸಾಹಿತ್ಯ ಸಮ್ಮೇಳನ

ಬಳ್ಳಾರಿಯಲ್ಲಿ ನಡೆಯಲಿರುವ ೨೩ನೆಯ ಕನ್ನಡಸಾಹಿತ್ಯ ಸಮ್ಮೇಳನಕ್ಕೆ ಶ್ರೀ. ಆರ್. ಆರ್. ದಿವಾಕರರು ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವುದು ಸಂತೋಷದ ಸಂಗತಿಯಾಗಿದೆ. ಈ ಬಾರಿಯ ಅಧ್ಯಕ್ಷರು, ಕರ್ನಾಟಕ ಏಕೀಕರಣ ಚಳವಳವು ಪ್ರಾರಂಭವಾಗಿರುವ ಈ ಕಾಲದಲ್ಲಿ, ಕನ್ನಡಿಗರಲ್ಲಿ ಹೊಸಹುರುಪನ್ನು ಹುಟ್ಟಿಸಿ, ಕನ್ನಡದ ಚಳವಳವು ಜೀವಕಳೆಯಿಂದ ತುಂಬಿ ಅತ್ಯಂತ ಯಶಸ್ವಿಯಾಗಿ ನಡೆಯುವಂತೆ ಮಾಡುವರೆಂದು ನಿರೀಕ್ಷಿಸಲಾಗಿದೆ.

೦೦೦

## ವಿಶ್ವ ವೈಚಿತ್ರ್ಯ



ನೀರಿನಡಿಯೂ ಶಾಕ! ಸಾಗರದಲ್ಲಿರುವ ಕೆಲವು ಮೀನುಗಳು ತಮ್ಮ ಶತ್ರುಗಳಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಹಾಗೂ ಶಾಕವಾದ ಸ್ಥಳದಲ್ಲಿರುವುದಕ್ಕಾಗಿ ಚಿತ್ರದಲ್ಲಿರುವಂತಹ ಗೂಡುಗಳನ್ನು ಕಟ್ಟುತ್ತಿವೆ. ಈ ಗೂಡನ್ನು ಬೇಕಾದಂತೆ ತಿರುಗಿಸಲು ಸಾಧ್ಯವಾಗುತ್ತದೆ. ಶತ್ರುವು ಎದುರಿನಿಂದ ಬಂದರೆ ಕೂಡಲೆ ಗೂಡು ಹಿಂದಕ್ಕೆ ತಿರುಗುತ್ತದೆ!

## ಸತ್ಯಾಗ್ರಹ ಚಳವಳ!

ಬ್ರಿಟಿಷ್ ಸರಕಾರವು ತಮ್ಮ ಫೆಡರಲ್ ಯೋಜನೆಯಲ್ಲಿ ಅವಶ್ಯವುಳ್ಳ ವ್ಯತ್ಯಾಸಗಳನ್ನು ಮಾಡದಿದ್ದರೆ ಸತ್ಯಾಗ್ರಹವನ್ನು ಪ್ರಾರಂಭಿಸುವುದು ಖಂಡಿತವೆಂದು ರಾಷ್ಟ್ರಪತಿ ಸುಭಾಷ ಜೋಸರು ಹೇಳಿದ್ದಾರೆ. ರಾಷ್ಟ್ರದಲ್ಲಿ ಸಮರಮನೋವೃತ್ತಿಯ ಬದಲು ವಿಧಾಯಕ ಕಾರ್ಯಕ್ರಮದಲ್ಲಿ ವಿಶೇಷ ಅಭಿರುಚಿಯುಂಟಾಗಿದೆಯೆಂದು ರಾಷ್ಟ್ರಪತಿಗಳು ಹೇಳಿರುವುದು ಸತ್ಯವಾಗಿದೆ. ಕಾಂಗ್ರೆಸ್ ಕಮಿಟಿಗಳು ಚುನಾವಣೆಗಾಗಿ ಮಾಡುವಷ್ಟು ಪ್ರಚಾರಕಾರ್ಯವನ್ನು ಫೆಡರೇಶನನ್ನು ವಿರೋಧಿಸುವುದಕ್ಕಾಗಿ ಮಾಡದಿರುವುದನ್ನು ನೋಡುವಾಗ ವಿಧಾಯಕ ಮನೋವೃತ್ತಿಯು ಎಲ್ಲಿಯ ತನಕ ಜನಮನದಲ್ಲಿ ಬೇರೂರಿದೆಯೆಂದು ಸ್ಪಷ್ಟವಾಗುತ್ತದೆ. ಬ್ರಿಟಿಷರು ಫೆಡರೇಶನನ್ನು ಜಾರಿಗೆ ತರುವ ವರೆಗೆ ಕಾದುಕೊಂಡಿರದೆ, ಭಾರತದ ಕೇಳಿಕೆಗಳನ್ನು ಮೊದಲೇ ಅವರ ಮುಂದಿಟ್ಟು, ಅವುಗಳು ಅಸ್ವೀಕೃತವಾದರೆ ಚಳವಳವನ್ನು ಪ್ರಾರಂಭಿಸುವುದು ವಿಹಿತವೆಂದು ರಾಷ್ಟ್ರಪತಿಗಳು ಹೇಳಿದ್ದಾರೆ.

---

**ಗೆಳೆಯರ ತಂಡದ ಸದಸ್ಯರಾಗುವವರು ಅಂತರಂಗದ ಕೆಳಗಿನ ಕೂಪನಿನಲ್ಲಿ ಬರೆಯಬೇಕು.**

## ಗೆಳೆಯರ ತಂಡದ ಸದಸ್ಯತನದ ಪತ್ರ.

ನಾನು 'ಗೆಳೆಯರ ತಂಡ'ಕ್ಕೆ ಸೇರಲಿಚ್ಛಿಸುತ್ತೇನೆ. ಆ ಬಗ್ಗೆ ಸದಸ್ಯತನದ ಆರು ತಿಂಗಳ ವರ್ಗಣಿಯಾದ ನಾಲ್ಕಾಣೆಯನ್ನು ಕಳುಹಿಸಿರುತ್ತೇನೆ.

ಹೆಸರು. . . . . . . . . . . . . . . . . . . . . .

ವಿಳಾಸ. . . . . . . . . . . . . . . . . . . . . .

ಉದ್ಯೋಗ. . . . . . . . . . . . . . . . . . . . . .

ಸಹಿ. . . . . . . . . . . . . . . . . . . . . .

# ರಾಜನೀತಿಯಲ್ಲಿ ಪ್ರಚಾರದ ಸ್ಥಾನ

## ಜೆಕೊಸ್ಲೊವೇಕಿಯದ ನಾಶಕ್ಕೆ ಹಿಟ್ಲರನ ಪ್ರಚಾರವೇ ಕಾರಣವಾಯಿತು!

ಪ್ರಚಾರವು ಆಧುನಿಕ ರಾಜನೀತಿಯ ಪ್ರಾಮುಖ್ಯ ಅಂಗಗಳಲ್ಲೊಂದಾಗಿದೆ. ದೊಡ್ಡ ಸಾಮ್ರಾಜ್ಯದಿಂದ ಮೊದಲ್ಗೊಂಡು ಸಾಮಾನ್ಯ ತರದ ಸಂಸ್ಥಾನದ ವರೆಗೆ ಪ್ರಚಾರವು ಬೇಕೇಬೇಕು.ಜಗತ್ತಿನಲ್ಲಿ ಪ್ರಚಾರದ ಮೂಲವು ಹೇಗಾಯಿತು. ಇತ್ತೀಚಿಗಿನ ಐರೋಪ್ಯ ಗೊಂದಲದಲ್ಲಿ ಲಿಂಡ್‌ಬರ್ಗರ ಪ್ರಚಾರವು ಎಂತಹ ಪರಿಣಾಮವನ್ನುಂಟು ಮಾಡಿತು ಎಂಬುದನ್ನಿಲ್ಲಿ ವಿವರಿಸಲಾಗಿದೆ.

## ಭಾರತದಲ್ಲಿ ಬ್ರಿಟಿಷರ ಪ್ರಚಾರ

## ಕಾಂಗ್ರೆಸಿನ ವಿಜಯವೂ ಪ್ರಚಾರದ ಮೇಲೆಯೇ ಹೊಂದಿಕೊಂಡಿರುತ್ತದೆ.

ಜಗತ್ತಿನ ಎಲ್ಲಾ ಕಲೆಗಳಿಗಿಂತ ಅಡಗಿಸಿಡುವ ಕಲೆಯೇ ಬಹಳ ಪ್ರಸಿದ್ಧವಾದುದೆಂದು ಪ್ರತೀತಿಯಿದೆ. ಪ್ರಚಾರಕಾರ್ಯವು ಶುಷ್ಕವಾದುದೆಂದು ದೂರಕ್ಕೆ ಕಾಣಿಸಿದರೂ ರಾಜನೀತಿಯಲ್ಲಿ ಅದರಷ್ಟು ಪ್ರಾಮುಖ್ಯವಾದ ಅಂಗವು ಬೇರೊಂದಿಲ್ಲ.

### ತಟಕು ನೀರಿನ ಮಹತ್ವ.

ಎತ್ತರವಾದ ಸ್ಥಳದಿಂದ ಬೀಳಬಹುದಾದ ಒಂದು ತಟಕು ನೀರನ್ನು ನೀವು ಕಡೆಗಣಿಸಬಹುದು. ಆದರೆ ಕಾಲಕ್ರಮೇಣ ಅದು ಕೆಳಗಿರಬಹುದಾದ ಎಂತಹ ಬಂಡೆಕಲ್ಲನ್ನಾದರೂ ಸವೆಯಿಸಬಲ್ಲುದೆಂಬುದನ್ನು ಅದೆಷ್ಟು ಮಂದಿ ತಿಳಿದಿದ್ದಾರೆ? ಇದೇ ರೀತಿಯಲ್ಲಿ ಕ್ರಮಪ್ರಕಾರವಾಗಿ ನಡೆಸಬಹುದಾದ ಪ್ರಚಾರಕಾರ್ಯದಿಂದ ರಾಜಕೀಯ, ಸಾಂಸ್ಕೃತಿಕ ಅಥವಾ ಔದ್ಯೋಗಿಕ ಪರಿಸ್ಥಿತಿಯಲ್ಲಿ ಎಂತಹ ವ್ಯತ್ಯಾಸಗಳನ್ನೂ ತಂದೊಡ್ಡಬಹುದು.

### ಪ್ರಚಾರದ ಮೂಲ.

ಈ ಪ್ರಚಾರವು ಮೊಟ್ಟಮೊದಲು ಧಾರ್ಮಿಕ ಕಾರ್ಯದ ಪ್ರಸಾರಕ್ಕಾಗಿ ಯುರೋಪಿನಲ್ಲಿ ತಲೆದೋರಿತು. ವ್ಯವಸ್ಥಿತ ಪ್ರಚಾರದಿಂದ ಕ್ರೈಸ್ತಧರ್ಮಕ್ಕೆ ಸೇರುವವರ ಸಂಖ್ಯೆಯು ದಿನಹೋದಂತೆ ಹೆಚ್ಚುತ್ತಾ ಬಂತು. ವಿದೇಶ ರಾಜನೀತಿಯ ಕುರಿತು ಬರೆಯುವುದರಲ್ಲಿ ಅಗ್ರಗಣ್ಯೆಯೆನಿಸಿದ ಮಿಸ್ ಡೊರೊತಿ ಥಾಮ್ಸನ್ ಎಂಬವಳು ಪ್ರಚಾರದ ಕುರಿತು ಬರೆಯುತ್ತಾ ಆಧುನಿಕ ಕೈಗಾರಿಕೆಗಳು ಅಧಿಕ ಸಂಖ್ಯೆಯಲ್ಲಿ ಪ್ರಗತಿಯನ್ನು ಹೊಂದಿದ ವಂತೆ ಸಾಧನಗಳನ್ನು ತಯಾರಿಸುವವರಿಗೆ ತಮ್ಮಲ್ಲಿ ಏನೆಲ್ಲಾ ಇವೆಯೆಂಬುದನ್ನು ತಿಳಿಸುವುದಕ್ಕಾಗಿ ಜಾಹೀರಾತನ್ನು ಮಾಡುವ ಆವಶ್ಯಕತೆಯುಂಟಾಯಿತು. ಹೀಗೆ ಪತ್ರಿಕೆಗಳಲ್ಲಿಜಾಹೀರಾತುಮಾಡುವ ಕ್ರಮವು ಜಾರಿಗೆ ಬಂತು.

### ರಷ್ಯದ ಪ್ರಚಂಡ ಪ್ರಚಾರ.

ಪ್ರಚಂಡ ಪ್ರಚಾರದ ಫಲಿತಾಂಶವು ಹೇಗಾಗುತ್ತದೆಂಬುದನ್ನು ನಾವು ಕಣ್ಣೆದುರೇ ಕಾಣಬಹುದಾಗಿದೆ. ರಷ್ಯ, ಜರ್ಮನಿ, ಇಟೆಲಿ ಮತ್ತು ಜಪಾನುಗಳಲ್ಲಿ ಸರಕಾರವೇ ಪ್ರಚಾರದ ಹೊಣೆಗಾರಿಕೆಯನ್ನು ವಹಿಸಿರುವುದರಿಂದ ಎಂತಹ ಅನಪೇಕ್ಷಿತ ಬದಲಾವಣೆಗಳು ತಲೆದೋರಿವೆ? ಜನಜೀವನದಲ್ಲಿ ಅತ್ಯಂತ ಅಪಾಯಕರವಾದ ವಿಚಾರವೆಂದರೆ ಅದು ಧರ್ಮಕ್ಕೆ ಸಂಬಂಧಪಟ್ಟದ್ದು. ನಾವು ಚರಿತ್ರೆಯನ್ನು ನೋಡುವುದಿದ್ದರೆ ಕಳೆದ ಶತಮಾನದ ತನಕ ಧರ್ಮದ ಹೆಸರಿನಲ್ಲಿ ಅದೆಷ್ಟು ರಕ್ತಪಾತವಾಗುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ. ಇಪ್ಪತ್ತೈದು ವರುಷಗಳ ಪ್ರಚಂಡ ಪ್ರಚಾರದಿಂದ ಕ್ರಾಂತಿಕಾರೀ ಸೋವಿಯೆಟ್ ರಷ್ಯವು ಶತಮಾನಶತಮಾನಗಳ ಅಂಧಶ್ರದ್ಧೆಯ ಬಲವಾದ ಅಡಿಗಟ್ಟಿನ ಮೇಲೆ ಕಟ್ಟಲ್ಪಟ್ಟ ಹಳೆ ಧಾರ್ಮಿಕ ಮನೋವೃತ್ತಿಯನ್ನು ಕೆಡವಿ ಹಾಕಿ ದೇವರ ಹೆಸರನ್ನು ಯಾರೂ ಉಚ್ಚರಿಸದಂತೆ ಮಾಡಿದೆ. ಈ ಪ್ರಚಾರದ ಪರಿಣಾಮವಾಗಿ ಹಳೆ ವಿಶ್ವಾಸಗಳಿದ್ದ ಅನೇಕಮಂದಿ ತಮ್ಮ ಪ್ರಾಣವನ್ನೂ ಕಳೆದುಕೊಳ್ಳಬೇಕಾಯಿತು. ೧೯೧೭ರ ಬಳಿಕ ಹುಟ್ಟಿದ ಎಲ್ಲಾ ಮಕ್ಕಳ ಆರೈಕೆ ಮೊದಲಾದವುಗಳ

ಹೊಣೆಗಾರಿಕೆಯನ್ನು ಸರಕಾರದ ಆಧೀನವಿರುವ ಸಂಸ್ಥೆಗಳು ವಹಿಸಿ ಕೊಂಡಿರುವುದರಿಂದ ರಷ್ಯದಲ್ಲಿ ಪರಮಾತ್ಮನ ವಿಚಾರವೇ ಮೂಲೆಪಾಲು ಮಾಡಲ್ಪಟ್ಟಿದೆ.

### ಎರಡು ವಿಧಾನಗಳು.

ಒಂದು ರಾಷ್ಟ್ರದಲ್ಲಿ ಪ್ರಜಾಪ್ರಭುತ್ವವಿರಲಿ, ಇಲ್ಲವೆ ನಿರಂಕುಶ ಪ್ರಭುತ್ವವಿರಲಿ, ಅಲ್ಲಿ ಪ್ರಚಾರವು ಬೇಕೇ ಬೇಕಾಗಿದೆ. ಸರ್ವಾಧಿಕಾರಿಗಳಿರುವ ರಾಷ್ಟ್ರಗಳಲ್ಲಿ ಪ್ರಚಂಡ ಪ್ರಚಾರಕಾರ್ಯವಿಲ್ಲದೆ ಒಂದು ವಾರದ ತನಕ ಯಶಸ್ವಿಯಾಗಿ ರಾಜ್ಯಭಾರ ನಡೆಸುವುದು ಕಠಿನವಾಗಿದೆ. ಜನತೆಯನ್ನು ಪ್ರಚಾರದ ಸುಂಟರಗಾಳಿಯಲ್ಲಿ ಸಿಲುಕುವಂತೆ ಮಾಡದಿದ್ದರೆ ಸರ್ವಾಧಿಕಾರಿಗಳು ತಮ್ಮ ಇಚ್ಛೆಬಂದಂತೆ ವರ್ತಿಸುವುದು ಅತ್ಯಂತ ಕಷ್ಟವಾಗಿದೆ. ವಾರ್ತಾಪತ್ರಿಕೆಗಳು, ರೇಡಿಯೊ, ಸಿನೆಮ, ಸಂಸ್ಥೆಗಳು, ಪುಸ್ತಕಗಳು, ಭಾಷಣಗಳು ಇವೇ ಮೊದಲಾದುವುಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳದಿದ್ದರೆ ಆಧುನಿಕ ಸರ್ವಾಧಿಕಾರಿತ್ವವು ಕೇವಲ ಕನಸಿನ ಮುಂಡಿಗೆಯಾಗಬಹುದು. ಪ್ರಚಾರಕಾರ್ಯದಲ್ಲಿ ಎರಡು ವಿಧಾನಗಳಿವೆ. ಸಾರ್ವಜನಿಕ ಮತ್ತು ಗುಪ್ತ ಪ್ರಚಾರ. ಇವುಗಳಲ್ಲಿ ಗುಪ್ತಪ್ರಚಾರಕಾರ್ಯವು ಬಹಳ ಕಷ್ಟವಾಗಿರುವುದಲ್ಲದೆ ಅದರ ಹೊಣೆಗಾರಿಕೆಯನ್ನು ವಹಿಸುವವರು ಬಹಳ ಚತುರರಾಗಿರಬೇಕಾಗುತ್ತದೆ. ರಾಜಕೀಯ ಪ್ರಚಾರವು ಸತ್ಯ, ಅರೆಸತ್ಯ ಅಥವಾ ಕೇವಲ ಮಿಥ್ಯರೂಪವನ್ನು ತಾಳಿಕೊಂಡಿರಬಹುದು. ಸರ್ವಾಧಿಕಾರಿಗಳು ತಮ್ಮ ರಾಷ್ಟ್ರದ ಜನತೆಯನ್ನು ಮೋಸಗೊಳಿಸುವುದಂತಿರಲಿ, ಚಾಣಾಕ್ಷರಾದ ರಾಜನೀತಿಜ್ಞರು ಕೂಡಾ ಅವರ ಅರೆಸತ್ಯಗಳನ್ನು ನಂಬುವಂತೆ ಮಾಡುವುದೂ ಅತ್ಯಾಶ್ಚರ್ಯಕರ ಸಂಗತಿಯಾಗಿದೆ.

**‘ಶಾಂತಿ’ಗೆ ಕೊನೆಯ ಔತಣ.**



ಲಿಂಡ್‌ಬರ್ಗರ ಪ್ರಚಾರದ ಪರಿಣಾಮವಾಗಿ ಜರ್ಮನಿಯ ವಿಮಾನಪಡೆಯನ್ನೆದುರಿಸಲು ಸಾಧ್ಯವಿಲ್ಲವೆಂಬ ಭಯದಿಂದ ಚೇಂಬರ್ಲೆನ್ ದಲಾದಿಯರರು ಮ್ಯೂನಿಕ್ ಒಪ್ಪಂದದ ವಿವರವನ್ನು “ಶಾಂತಿ”ಗೆ ಹೇಳುತ್ತಿದ್ದಾರೆ.

### ಜಂಭದ ರಹಸ್ಯ.

ಸರ್ವಾಧಿಕಾರಿಗಳು ಬಹಳ ಜಾಗರೂಕತೆಯಿಂದ ಅನುಸರಿಸಿಕೊಂಡು ಬರುವ ಒಂದು ಪ್ರಾಮುಖ್ಯ ವಿಷಯವೆಂದರೆ ನಿಜಸ್ಥಿತಿಯನ್ನು ಬಯಲಿಗೆ ತಾರದಿರುವುದು. ಇತ್ತೀಚೆಗೆ ಪ್ರಜಾಸತ್ತೆಯ ಹೆಸರಿನಲ್ಲಿ ತನ್ನ ಪ್ರಾಣದಾನಮಾಡಿಕೊಂಡ ಜೆಕೊಸ್ಲೊ

ವೇಕಿಯಕ್ಕೆ ವಿರೋಧ ರಾಷ್ಟ್ರಗಳಂತೆ ಜಂಭ ಕೊಚ್ಚಿಕೊಳ್ಳಲು ತಿಳಿದಿದ್ದರೆ ಅವರ ಪಾಡು ಇಂದಿನಂತಾಗುತ್ತಿದ್ದಿಲ್ಲ. ಜಂಭವನ್ನು ಸೊಗಸಾಗಿ ಚಿತ್ರಿಸುವಂತಹ ಒಂದು ಕಟ್ಟುಕತೆಯು ಚೀನೀ ಭಾಷೆಯಲ್ಲಿದೆ. ಅದು ವಿಷಯವನ್ನು ಸೊಗಸಾಗಿ ವಿವರಿಸುವುದರಿಂದ ಅದನ್ನು ಉದ್ಧರಿಸಿದರೆ ಅಪ್ರಸ್ತುತವಾಗಲಾರದೆನ್ನಿ.

### ಮಂಗನ ಚಾತುರ್ಯ

ಬಹಳ ಹಸಿದಿರುವ ಹುಲಿಯೊಂದು ಬೇರಾವ ಪ್ರಾಣಿಯೂ ಸಿಗದೆ ಒಂದಾನೊಂದು ಮಂಗವನ್ನು ಹಿಡಿಯಿತು. ಹುಲಿಯ ಬಾಯಿಯಿಂದ ಹೇಗಾದರೂ ತಪ್ಪಿಸಿಕೊಳ್ಳಬೇಕೆಂಬ ಮಹದಭಿಲಾಷೆಯು ಮಂಗನಲ್ಲುಂಟಾಗಿ ಒಂದು ಉಪಾಯಮಾಡಿತು. ಸಮಾಧಾನದಿಂದ ಮಂಗವು ಹುಲಿಯೊಡನೆ ಹೇಳಿತು. "ಮಹಾರಾಯಾ, ಮೊದಲೇ ನನ್ನ ದೇಹ ಕ್ಷೀಣವಾಗಿದೆ. ಒಂದೆರಡು ಎಲುಬುಗಳಲ್ಲದೆ ಬೇರಾವುದೂ ನಿನಗೆ ನನ್ನ ಶರೀರದಲ್ಲಿ ಸಿಕ್ಕಲಿಕ್ಕಿಲ್ಲ. ಸಮೀಪದಲ್ಲಿಯೇ ಕೊಬ್ಬಿದ ಒಂದು ಕತ್ತೆಯಿದೆ. ಮನಸ್ಸಿದ್ದರೆ ನನ್ನನ್ನು ಹಿಂಬಾಲಿಸು. ಸುಖವಾಗಿ ತಿಂದು ನಿನ್ನ ಹಸಿವೆಯನ್ನು ತಣಿಸಬಹುದು." ಕೊಬ್ಬಿದ ಕತ್ತೆಯ ಮಾಂಸವನ್ನು ತಿಂದು ತೇಗಲು ಹುಲಿಗೆ ಆಶೆಯಾಗಿ ಅದು ಮಂಗನ ಹಿಂದೆಯೇ ಹೋಯಿತು. ಕಾಡಿನಿಂದ ಹೊರಗೆ ಹೋದೊಡನೆಯೇ ಹುಲ್ಲುಗಾವಲಲ್ಲಿ ಮೇಯುತ್ತಿದ್ದ ಕತ್ತೆಯನ್ನು ಮಂಗಣ್ಣ ಹುಲಿಗೆ ತೋರಿಸಿದ. ಮಂಗನ ಹಿಂದೆಯೇ ಹುಲಿ ಬರುತ್ತಿರುವುದನ್ನು ಕಂಡು ಕತ್ತೆಯಪ್ರಾಣ ಹಾರಿಹೋಗುವುದರಲ್ಲಿತ್ತು. ಆಪತ್ತಿನಲ್ಲಿ ಧೈರ್ಯವನ್ನು ತಂದುಕೊಳ್ಳಬೇಕೆಂದು ಮೊದ್ದು ಜಂತುವಾದರೂ ಆ ಕತ್ತೆ ಓಡದೆ ಒಂದು ಉಪಾಯವನ್ನು ಮಾಡಿತು. ಹೆದರಿಕೆಯಿಂದ ನಡುಗುತ್ತಿದ್ದ ಕಾಲುಗಳನ್ನು ಸರಿಪಡಿಸಿ, ಪ್ರಖ್ಯಾತವಾದ ತನ್ನ ಗಾರ್ದಭ ಸ್ವರದಿಂದ ಗಟ್ಟಿಯಾಗಿ ಹೀಗೆ ಹೇಳಿತು: "ಕಡುಮೂರ್ಖ ಮಂಗಾ, ಯಾವಾಗಲೂ ನೀನು ಎರಡು ಹುಲಿಗಳನ್ನು ಕರೆದುಕೊಂಡು ಬರುತ್ತಿದ್ದಿ. ಇವತ್ತು ಒಂದೇ ಹುಲಿಯನ್ನು ಕರೆದುಕೊಂಡು ಬಂದಿರುವೆಯಲ್ಲಾ, ಇದು ನನ್ನೀ ದೊಡ್ಡ ಹೊಟ್ಟೆಗೆ ಎಲ್ಲಿಗೆ ಸಾಕು, ನಿನಗಿಷ್ಟೂ ಬುದ್ಧಿಯಿಲ್ಲವೆ?" ಹೊಟ್ಟೆ ಬೆನ್ನಿಗೆ ಸೇರಿದ್ದ ಹುಲಿರಾಯನಿಗೆ ಕತ್ತೆಯ ಆರ್ಭಟವನ್ನು ಕೇಳಿ ಹೆದರಿಕೆಯಾಯಿತು. ಜೀವವಿದ್ದರೆ ಹೇಗಾದರೂ ಬದುಕಿಕೊಂಡೇನೆಂದು ಹುಲಿರಾಯ ಸಾಧ್ಯವಾದಷ್ಟು ವೇಗವಾಗಿ ಓಡಿಬಿಟ್ಟ." ಈ ಕತೆಯನ್ನು ವಿವರಿಸುವ ಆವಶ್ಯಕತೆಯೇಲ್ಲಇ.

### ಐರೋಪ್ಯ ಅವ್ಯವಸ್ಥೆ.

ಮೊನ್ನೆ ನಡೆದ ಜೆಕೋಸ್ಲೊವೇಕಿಯದ ಗೊಂದಲದಲ್ಲಿ ಕತ್ತೆಯ ಉಪಾಯವನ್ನು ಜರ್ಮನಿಯು ಮಾಡಿಬಿಟ್ಟಿತು. ಜೀವರಕ್ಷಣೆಗಾಗಿ ಸುಳ್ಳಾಡುವುದು ಅನ್ಯಾಯವೆಂದು ಯಾರೂ ಹೇಳಲಿಕ್ಕಿಲ್ಲ. ಆದರೆ ಜರ್ಮನಿಯು ತನ್ನ ಸ್ವರಕ್ಷಣೆಗಾಗಿ ಜೆಕೊಸ್ಲೊವೇಕಿಯದ ಕೊರಳನ್ನು ಮುರಿಯಿತೆಂದು ಯಾರಾದರೂ ಹೇಳುವರೆ? ಅಮೇರಿಕ, ಜನಾಂಗ ಸಭೆ, ಪೋಲೆಂಡ್, ರುಮೇನಿಯ, ಮತ್ತು ಯುಗೊಸ್ಲೇವಿಯಗಳು ಒಂದಾದರೆ, ಬ್ರಿಟನ್, ಫ್ರಾನ್ಸ್ ಮತ್ತು ರಷ್ಯ ಮೊದಲಾದ ಬೃಹತ್ ರಾಷ್ಟ್ರಗಳು ಒಟ್ಟಾದರೆ ಜರ್ಮನಿ ಇಟೆಲಿಗಳನ್ನು ವಿರೋಧಿಸುವುದು ಅದೆಂತಹ ಮಹಾ? ಇತ್ತೀಚೆಗೆ ಕಲ್ಕತ್ತದ "ಸ್ಟೇಟ್ಸ್‌ಮನ್" ಪತ್ರಿಕೆಯಲ್ಲಿ ಪ್ರಕಟವಾದಂತೆ ಜರ್ಮನಿಯ ಸೈನ್ಯವು ಯುದ್ಧವಾರಂಭವಾಗಿದ್ದರೆ ಅದರಲ್ಲಿ ಭಾಗವಹಿಸಲು ಪೂರ್ಣ ಶಕ್ತವಾಗಿದ್ದಿಲ್ಲ. ಸೈನ್ಯವು ಇನ್ನೂ ಸುಧಾರಿಸಲ್ಪಡಲಿಲ್ಲ. ಈಗಲೂ ಹಲಕೆಲವು ಪ್ರಾಮುಖ್ಯ ಬದಲಾವಣೆಗಳು ಸೈನ್ಯದಲ್ಲಿ ನಡೆಯುತ್ತಲೇ ಇವೆ. ಹೆಚ್ಚಿನ ಸೈನ್ಯ ಸರಂಜಾಮುಗಳು ಹಳೆಯ ಕಾಲದವು. ಯುದ್ಧಕ್ಕಾಗಿ ತೆಗೆದಿಡಲ್ಪಟ್ಟ ಆಹಾರಸಾಧನಗಳಲ್ಲಿ ಶೇಕಡಾ ೫೦ರಷ್ಟು ಕಡಿಮೆಯಾಗಿದೆ. ಜರ್ಮನಿಯ ಪರಿಸ್ಥಿತಿಯು ಇಷ್ಟು ದೀನವಾಗಿದ್ದರೂ ಇಂಗ್ಲಂಡ್ ಫ್ರಾನ್ಸುಗಳು ಜರ್ಮನಿಯೊಡನೆ ಹೋರಾಡಲು ಸಾಧ್ಯವಾಗಲಾರದೆಂದು ಬೆದರಿ ತಮ್ಮ ಮಾನವನ್ನು ಮಾರಿಕೊಂಡವು. ಇದರ ಪರಿಣಾಮವಾಗಿ ಜಗತ್ತಿನ ದೊಡ್ಡ ಕಾರ್ಖಾನೆಗಳಲ್ಲೊಂದಾದ "ಸ್ಕಾಡಾ" ಯುದ್ಧಸಾಧನಗಳನ್ನು ತಯಾರಿಸುವ ಕಾರಖಾನೆಯೂ, ಸ್ಯುಡೇಟನ್ ಪ್ರಾಂತ್ಯವೂ ಹಿಟ್ಲರನ ಪಾಲಾಯಿತು. ಒಮ್ಮೆಯಾದರೂ ಗುಂಡಿಸೆಯದೆ ಈ ಫಲವತ್ತಾದ ಭೂಮಿಯು ನಾಝಿಗಳಿಗೆ ಸಿಕ್ಕಿತು.

### ಹಿಟ್ಲರನಿಗೆ ಜಯವಾದುದೆಂತು?

ಹಿಟ್ಲರನಿಗೆ ಅಷ್ಟೊಂದು ಸುಲಭ

ವಾಗಿ ಸ್ಯುಡೇಟನ್ಸ್ ಪ್ರಾಂತ್ಯವು ಹೇಗೆ ದೊರಕಿತು? ಇಷ್ಟೊಂದು ಮಹತ್ವದ ಉಪಾಯವು ಹಿಟ್ಲರನಿಗೆ ಹೇಗೆ ತಿಳಿಯಿತು. ಈ ರಹಸ್ಯವು ವಿದೇಶ ವಿಚಾರಗಳಲ್ಲಿ ಅತ್ಯಂತ ಪ್ರಾಮುಖ್ಯವಾಗಿದೆ. ಯುರೋಪಿನ ಚರಿತ್ರಾರ್ಹಗೊಂದಲದಲ್ಲಿ ಅಲ್ಪ ಸಂಖ್ಯೆಯ ಶುಷ್ಕ ಸಮಸ್ಯೆಯು ಹಿಟ್ಲರನಿಗೆ ಜಯವನ್ನುಂಟುಮಾಡಲಿಲ್ಲ. ಪ್ರಸಿದ್ಧ ವೈಮಾನಿಕನಾದ ಕರ್ನಲ್ ಲಿಂಡ್ ಬರ್ಗನು ಮಾಡಿದ ಪ್ರಚಾರದ ಪರಿಣಾಮವಾಗಿ ಬ್ರಿಟಿಷ್ ಮತ್ತು ಫ್ರೆಂಚ್ ರಾಜನೀತಿಜ್ಞರು ಜರ್ಮನಿಯ ಭಾವನಾಶಕ್ತಿಗೆ ಬೆದರಿದರು. ಕತ್ತೆಯ ಸಾಮ್ಯವನ್ನು ನಾವು ಇನ್ನಷ್ಟು ವಿವರಿಸೋಣ.

**ಗುಪ್ತಪ್ರಚಾರ.**

ಪ್ರಾಣಿ ಸಂಕುಲದ ಗುಪ್ತವಾದೊಂದು ಸಭೆಯಲ್ಲಿ ಮಂಗಕರ್ನಲ್ ಲಿಂಡ್‌ಬರ್ಗ್ ಕೆಲವು ಪ್ರಾಮುಖ್ಯ ರಹಸ್ಯಗಳನ್ನು ಹೇಳಿದ. ಪರಿಶುದ್ಧ ಸಸ್ಯಾಹಾರಿಯಾಗಿದ್ದ ಕತ್ತೆ ಹೆರ್ ಹಿಟ್ಲರನುಅನಿರೀಕ್ಷಿತವಾಗಿಮಾಂಸಾಹಾರಿಯಾಗಿದ್ದಾನೆ. ಸಸ್ಯಗಳ ಬದಲು ಸಿಕ್ಕಿದ ಪ್ರಾಣಿಗಳನ್ನು ನುಂಗುತ್ತಿದ್ದಾನೆ. ಬ್ರಿಟಿಷ್ ಸಿಂಹ ಚೇಂಬರ್ಲೆನ್ ಕಾರಣವಿಲ್ಲದೆ ಪ್ರಾಣಿಗಳ ಬದಲು ಸಸ್ಯಗಳನ್ನು ತಿನ್ನಲಾರಂಭಿಸಿದ್ದಾನೆ. ಏಸ್ಯಾಖಂಡದ ಕರಡಿ ಸ್ಟಾಲಿನ್ ತನ್ನ ಹಲ್ಲು ಮತ್ತು ಉಗುರುಗಳನ್ನು ಕಳಕೊಂಡಿದ್ದಾನೆ. ದಡದಿಂದ ದಡಕ್ಕೆ ಹಾರುತ್ತಿದ್ದ ಫ್ರೆಂಚ್ ಕಪ್ಪೆ ದಲಾದಿಯರ್ ತೊಂದೆ ಕಪ್ಪೆಯಾಗಿ ಮಾರ್ಪಾಟು ಹೊಂದಿದೆ ಇನ್ನೊಂದು ರೀತಿಯಲ್ಲಿ ಹೇಳುವುದಿದ್ದರೆ ಕರ್ನಲ್ ಲಿಂಡ್ ಬರ್ಗನು ಬ್ರಿಟಿಷ್, ಫ್ರಾನ್ಸ್ ಮತ್ತು ರಷ್ಯಗಳು ಒಂದುಗೂಡಿದರೆ ಜರ್ಮನಿಯ ವಿಮಾನಪಡೆಯನ್ನೆದುರಿಸಲು ಸಾಧ್ಯವಿಲ್ಲವೆಂದುಹೇಳಿದ. ಈ ಉಪಾಯದಿಂದ ಜರ್ಮನಿಯು ಹೇಗಾದರೂ ಬದುಕಿಕೊಂಡಿತು.

**ಲಿಂಡ್ ಬರ್ಗನ ಮಂಗಬುದ್ಧಿ.**

ಕರ್ನಲ್ ಲಿಂಡ್ ಬರ್ಗನು ತನ್ನ ಮಂಗ ಬುದ್ಧಿಯನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದ್ದಾನೆ. ಕಾರಣ- ಕೆಲವೇ ತಿಂಗಳುಗಳ ಹಿಂದೆ ಇದೇ ಲಿಂಡ್‌ಬರ್ಗ ರಷ್ಯವನ್ನು ಸಂದರ್ಶಿಸಿ ಹಿಂದೆ ಬಂದ ಕಾಲದಲ್ಲಿ ರಷ್ಯದ ವಿಮಾನ ಪಡೆಗೆ ಸರಿಹೋಲುವ ಇನ್ನೊಂದು ಪಡೆಯೇ ಜಗತ್ತಿನಲ್ಲಿಲ್ಲವೆಂದು ಹೇಳಿದ್ದ. ಈ ಪ್ರಶಸ್ತಿ ಪತ್ರವನ್ನು ರಷ್ಯಕ್ಕೆಕೊಟ್ಟದ್ದಕ್ಕಾಗಿಯೇ ಸ್ಟಾಲಿನನು ರಷ್ಯದ ವಿಮಾನ ಪಡೆಯ ಅಧ್ಯಕ್ಷತೆಯನ್ನು ಲಿಂಡ್‌ಬರ್ಗನಿಗೆ ಒಪ್ಪಿಸಲು ಕಾರಣವಾಯಿತು. ಬ್ರಿಟಿಷ್ ಪ್ರಧಾನರಾದ ನೆವಿಲ್‌ಚೇಂಬರ್ಲೆನರು ಹಿಟ್ಲರನು ಹೇಳಿದಂತೆ ಕುಣಿಯುವಂತಾಗಲು ಲಿಂಡ್ ಬರ್ಗನೇ ಕಾರಣನಾಗಿದ್ದನೆಂದು ಹೇಳಬಹುದು. ಅಮೇರಿಕದ ವೈಮಾನಿಕನಿಗೆ ಹೆರ್ ಹಿಟ್ಲರನು ಜರ್ಮನಿಯ ಅತಿ ದೊಡ್ಡ ಬಿರುದನ್ನು ಸುಮ್ಮನೆ ಕೊಟ್ಟನೆ? ಈ ಪ್ರಶ್ನೆಯನ್ನು ಉತ್ತರಿಸುವುದು ಅನವಶ್ಯಕವಾದರೂ ಲಿಂಡ್‌ಬರ್ಗರ ಮಂಗ ಬುದ್ಧಿಯು ಹೆರ್ ಹಿಟ್ಲರನಿಗೆ ವಿಜಯವನ್ನುಂಟುಮಾಡಿತು. ಇದು ಗುಪ್ತ ಪ್ರಚಾರದ ಅತ್ಯುಚ್ಛವಾದೊಂದು ಮಾದರಿಯಾಗಿದೆ. ಅರೆ ಸತ್ಯ, ಶುದ್ಧ ಸುಳ್ಳುಗಳನ್ನು ಯಶಸ್ವಿಯಾಗಿ ಪ್ರಚಾರಮಾಡಿ,ಬ್ರಿಟನ್ ಫ್ರಾನ್ಸುಗಳ ಸುಪ್ರಸಿದ್ಧ ಚತುರರಾಜನೀತಿಜ್ಞರನ್ನು ಮೋಸಕ್ಕೀಡು ಮಾಡಿದ ಈ ಗುಪ್ತ ಪ್ರಚಾರಕ್ಕಿಂತಲೂ ಮಹತ್ವದ ನಿದರ್ಶನವು ಬೇರಾವುದಿದೆ?

**ಸಾರ್ವಜನಿಕ ಪ್ರಚಾರ.**

ಸಾರ್ವಜನಿಕ ಪ್ರಚಾರವು ಹೇಗೆ ಮಾಡಲ್ಪಡುತ್ತಿದೆಯೆಂಬುದು ಬಹಳ ಸ್ವಾರಸ್ಯವಾಗಿದೆ. ವ್ಯಾಪಾರದಲ್ಲಿ ಮಾಡಲ್ಪಡುವ ಎಲ್ಲಾ ರಹಸ್ಯಮಯ ವಿಧಾನಗಳನ್ನು ಸರ್ವಾಧಿಕಾರಿಗಳು ತಮ್ಮ ರಾಷ್ಟ್ರಗಳಲ್ಲಿ ಜಾರಿಗೆ ತರುತ್ತಾರೆ. ಇದನ್ನು ಬ್ರಿಟಿಷರು ಚೆನ್ನಾಗಿ ಮನಗಂಡಿರುವರೆಂಬುದಕ್ಕೆ ಭಾರತವೇ ಮಹತ್ವದ ಒಂದು ನಿದರ್ಶನವಾಗಿದೆ. ತಮ್ಮ ವಿರೋಧಪಕ್ಷದಲ್ಲಿ ಒಡಕನ್ನುಂಟುಮಾಡಿ ಅದರ ಶಕ್ತಿಯನ್ನು ಕುಗ್ಗಿಸುವುದು ಅವರ ಪ್ರಾಮುಖ್ಯ ಧೋರಣೆಗಳಲ್ಲೊಂದಾಗಿದೆ. ಅದರಿಂದಾಗಿಯೇ ಹಿಂದೂ-ಮುಸಲ್ಮಾನರೊಳಗಿನ ಜಗಳವು ಭಾರತದಲ್ಲಿ ಇನ್ನೂ ಮುಗಿಯುವುದಿಲ್ಲ. ಬ್ರಿಟಿಷ್ ಸರಕಾರವು ಹಲವು ಮಂದಿಗೆ ಲಂಚಕೊಟ್ಟು ಪರಸ್ಪರ ಐಕ್ಯಕ್ಕೆ ಭಂಗವನ್ನುಂಟುಮಾಡುವ ಪ್ರಚಾರ ಕಾರ್ಯವನ್ನು ನಡೆಸುತ್ತದೆ.

**ಸರ್ವಾಧಿಕಾರಿಗಳ 'ಸತ್ಯ'**

ಸರ್ವಾಧಿಕಾರಿಗಳು ತಮ್ಮ ರಾಷ್ಟ್ರಗಳಲ್ಲಿ ವಿವಿಧ ಪ್ರಚಾರ ಸಾಧನಗಳ ಮೂಲಕ ತಮ್ಮವೈಶಿಷ್ಟ್ಯಗಳನ್ನೂ, ತೀರಾ ಸುಳ್ಳಾಗಿರುವ ತಮ್ಮ ಸ್ವಂತ "ಸತ್ಯ"ಗಳನ್ನೂ ಪ್ರಚಾರ ಮಾಡುತ್ತಾರೆ. ಅವರು ಹೇಳುವ "ಸತ್ಯ"ವನ್ನು ಪ್ರತಿಯೊಬ್ಬರೂ ನಂಬಲೇಬೇಕು. ಸರ್ವಾಧಿಕಾರಿಗಳ ಪ್ರಚಾರ ಕಾರ್ಯದ ರಹಸ್ಯವು ಹೆಚ್ಚಿನವರಿಗೆ

(೧೧ನೆ ಪುಟ ನೋಡಿರಿ)

# "ವಿವಾಹವು ದೈವತಂತ್ರದ ಅಧೀನ; ಅದರಲ್ಲಿ ಮಾನವ ಯತ್ನ ಸಾಗಲಾರದು!"

ಒಂದು ನೀಳ್ಗತೆ

[ ಬಂಗಾಲಿ ಕತೆಯೊಂದರ ಭಾವಾನುವಾದ ]

''ಕನ್ನಡ ಕುವರ''ರಿಂದ



''ಚಟರ್ಜಿಯು ಆ ಸುಂದರಿಯನ್ನು ದೂಡಿ ಬಾಗಿಲ ಬಳಿಗೆ ಸರಿದು, ಕಪಟ ಬೇಂಕರನನ್ನು ದುರದುರನೆ ನೋಡಿದ".

ಕಲ್ಕತ್ತ. ಸಂಧ್ಯಾಕಾಲವಾಗಿದೆ. ಮಧ್ಯಾಹ್ನದ ಬಿಸಿಲಿನಿಂದ ನಗರವು ಬೆಂದು ಬೆಂಡಾಗಿ ಸಾಯಂಕಾಲವನ್ನು ನಿರೀಕ್ಷಿಸುತ್ತಿತ್ತು. ಜನಸಂಖ್ಯೆಯಿಂದ ಕಿಕ್ಕಿರಿದ ನಗರದ ಬೀದಿಗಳಲ್ಲಿ ವಿಹಾರಾರ್ಥವಾಗಿ ಅಲೆಯುತ್ತಿದ್ದ ಜನರು ಅಂಗಡಿಗಳ ಮನೋಹರವಾದ ಕಿಟಕಿಗಳನ್ನೋ ಸಿನೆಮದ ಜಾಹಿರಾತುಗಳನ್ನೋ ನೋಡಿ ನಿರಾಯಾಸವಾಗಿ ನಡೆಯುತ್ತಿದ್ದರು. ಆ ಜನಸಂದಣಿಯ ಮಧ್ಯದಲ್ಲಿ ಕಲ್ಕತ್ತೆಗೆ ಅದೇ ದಿನ ಬಂದಿದ್ದ ಒಬ್ಬ ಯುವಕನೂ ಸೇರಿಕೊಂಡಿದ್ದ.

ತರುಣನಲ್ಲದಿದ್ದರೂ ಅವನಲ್ಲಿ ತಾರುಣ್ಯದ ಸಂಜ್ಞೆಗಳು ಎಚ್ಚೆತ್ತು ಕಾಣುತ್ತಿದ್ದುವು. ಗಟ್ಟಿಮುಟ್ಟಾದ ದೇಹವಾದುದರಿಂದ ನೋಡುವಾಗಲೇ ಬಲಶಾಲಿಯೆಂದು ಕಾಣಿಸುತ್ತಿತ್ತು. ಅವನ ಕಣ್ಣುಗಳನ್ನು ಕಂಡರೆ ನೀವು ಹೆದರಿ ಹೋಗಬಹುದು. ಅವನ ಅಂತರಾಳದಲ್ಲಿ ಅಪಾಯಕರವಾದ ಭಾವನೆಯೊಂದು ಅಡಗಿಕೊಂಡಂತೆ ನಿಮಗೆ ನೋಡಿದೊಡನೆಯೇ ಕಾಣಬಹುದು. ಅವನ ಕಣ್ಗೊಂಬೆಗಳು ತಿರುಗುವ ರೀತಿ, ಎವೆಯಿಕ್ಕದೆ ನಿಮ್ಮನ್ನೇ ನೋಡುವ ಕ್ರಮ, ಅವನ ವಿಚಿತ್ರ ನಡೆ, ಇವೆಲ್ಲವೂ ನಿಮ್ಮನ್ನು ಬೆದರಿಸುವಂತಿದ್ದುವು.

ಏಳು ವರುಷಗಳ ಹಿಂದೆ ಅದೇ ಕಲ್ಕತ್ತದ ಬೀದಿಗಳಲ್ಲಿ ಆ ತರುಣ ತಾರುಣ್ಯದ ಸುಖೋಪಭೋಗಗಳ ಬೇಟೆಯನ್ನು ಮಾಡಲಿಕ್ಕಾಗಿ ಅಲೆಯುತ್ತಿದ್ದುದನ್ನು ನೀವು ಕಂಡಿರಬಹುದು. ಉಂಡುಟ್ಟು ಸುಖಿಸುವ ಸಿರಿವಂತರಂತೆಯೇ ಆ ತರುಣನೂ ನೂರಾರು ವಿಧದ ಸುಖವನ್ನು ಪಡೆಯುತ್ತಿದ್ದ. ಅನಿರೀಕ್ಷಿತವಾಗಿ ಅವನು ಕಲ್ಕತ್ತದಿಂದಲೇ ತಪ್ಪಿಸಿಕೊಳ್ಳುವಂತಾಯಿತು. ರಮಾನಾಥ ಚಟರ್ಜಿಯು ಕಾಣೆಯಾದ ನಿಗೂಢ ರೀತಿಯು ಆ ಕಾಲದಲ್ಲಿ ದೊಡ್ಡ ಗೊಂದಲವನ್ನುಂಟು ಮಾಡಿತು. ಅವನು ಕ್ರಾಂತಿಕಾರರ ಪಕ್ಷವನ್ನು ಸೇರಿ, ನಿಗೂಢವಾದೊಂದು ರಾಜಕೀಯ ಸಂಸ್ಥೆಗೆ ಸೇರಿದನೆಂದು ಜನರು ಹೇಳಲಾರಂಭಿಸಿದರು. ಆದರೆ ಅವನ ಸಮೀಪದ ಸಂಬಂಧಿಗಳು ಹಾಗೆ ಭಾವಿಸದೆ ರಮಾನಾಥನು ತನ್ನ ಉಕ್ಕೇರುವ ತಾರುಣ್ಯದ ಪ್ರಭಾವದಿಂದ ಯಾವುದನ್ನೂ ಲಕ್ಷಿಸದೆ ಸಿಕ್ಕಾಬಟ್ಟೆ ಜೀವನವನ್ನು ನಡೆಸುತ್ತಿದ್ದಾನೆಂದು

ಹೇಳುತ್ತಿದ್ದರು. ಆದರೆ ಚಟರ್ಜಿಯು ಜಗತ್ತಿನ ಯಾವ ಭಾಗದಲ್ಲಿದ್ದನೆಂದು ಯಾರಿಗೂ ಗೊತ್ತಿದ್ದಿಲ್ಲ.

ಹೆರ್‍ರ್ಯಾಸನ್ ರೋಡಿನ ಪ್ರಸಿದ್ಧವಾದೊಂದು ಹೊಟೆಲಿನೆದುರು ಚಟರ್ಜಿಯು ಅರೆನಿಮಿಷ ನಿಂತು, ತನ್ನ ಜೇಬಿನ ಪರಿಸ್ಥಿಯನ್ನು ತಿಳಿದು ಸಮಾಧಾನದ ಮುಖಭಾವದಿಂದ ಹೊಟೆಲಿನೊಳಗೆ ಪ್ರವೇಶಿಸಿ, ಬಹಳ ಉತ್ಸಾಹದಿಂದ "ರಾಷ್ಟ್ರೀಯ ಬೇಂಕಿ"ನ ಅವ್ಯವಸ್ಥೆಯ ಕುರಿತು ಚರ್ಚಿಸುತ್ತಿದ್ದ ಕೆಲವು ಮಹನೀಯರ ಸಮೀಪದಲ್ಲಿ ಕುಳಿತುಕೊಂಡ. ಬೇಂಕಿನ ಡೈರೆಕ್ಟರರ ಮೇಲೆ ಪ್ರತಿಯೊಬ್ಬರೂ ಸಹಿಸಲಸಾಧ್ಯವಾದ ಆರೋಪಗಳನ್ನು ಸ್ಫೂರ್ತಿಯಿಂದ ಹೊರಿಸುತ್ತಿದ್ದರು. ಚರ್ಚೆಯು ಪ್ರಚಂಡವಾಗಿ ನಡೆಯುತ್ತಿದ್ದಂತೆಯೇ ಗಿಡ್ಡ ದೇಹದ ತೋರ ವ್ಯಕ್ತಿಯೊಂದೆದ್ದು ನಿಂತು— ನನಗೆಲ್ಲಾ ತಿಳಿದಿದೆ, ಬೇಂಕಿನ ಡೈರೆಕ್ಟರರು ಸಿಕ್ಕಾಬಟ್ಟೆ ಹಣವನ್ನು ಬೇಂಕಿನಿಂದ ತೆಗೆದುಕೊಂಡಿದ್ದಾರೆ, ಯಾವ ಧೈರ್ಯದಿಂದ ಅವರು ಹಣ ತೆಗೆದಿರುವುದೆಂದು ಯಾರಾದರೂ ಹೇಳುವರೇ? ಅವರ ಆರ್ಥಿಕ ಪರಿಸ್ಥಿತಿಯನ್ನು ಕಂಡರೆ ಇದಕ್ಕಾಗಿ ಎಂಥವರೂ ನಗದಿರಲಿಕ್ಕಿಲ್ಲವೆಂಬ ಚಿಕ್ಕ ಭಾಷಣವನ್ನೆ ಮಾಡಿತು. ನಿರುದ್ಯೋಗಿಯಾದೊಬ್ಬ ಸುಶಿಕ್ಷಿತ ತರುಣನು ನಡುವೆ ಬಾಯಿಹಾಕಿ ಬೇಂಕಿನ ಎರಡು ಸಾವಿರಕ್ಕಿಂತಲೂ ಮಿಕ್ಕಿದ ಉದ್ಯಮಿಗಳು ಡೈರೆಕ್ಟರರಿಗೆ ಒಂದಲ್ಲ ಒಂದು ವಿಧದಿಂದ ಸಂಬಂಧಿಸಿದವರೆಂದು ಧೈರ್ಯದಿಂದ ಹೇಳಿಬಿಟ್ಟ.

"ಅಥವಾ ಅವರಚೇಳರಿಗೆ ಕೆಲಸ ಕೊಟ್ಟಿದ್ದಾರೋ" ಎಂದು ಅಡ್ಡ ಬೆಳೆದ ಇನ್ನೊಬ್ಬರು ಹೇಳಿ ತಮ್ಮ ಸ್ವಂತ ಚಾತುರ್ಯದ ಮಾತಿಗಾಗಿ ಇತರರು ನಗಾಡುವುದನ್ನು ಕಂಡು ತಡೆಯಲಾರದೆ,ಕುಡಿಯುತ್ತಿದ್ದ ಚಹಾ ಬಾಯಿಯ ಬದಲಾಗಿ ಮೂಗು ತಲೆಯೊಳಗೆ ಹೋದುದರ ಪರಿಣಾಮವಾಗಿ ನಾಲ್ಕೈದು ನಿಮಿಷಗಳ ತನಕ ಎಡೆಬಿಡದೆ ಸೀನುತ್ತಾ ಕೆಮ್ಮಿದ್ದರಿಂದ ಸುತ್ತಮುತ್ತಲಿನ ನಾಲ್ಕೈದು ಮಂದಿಯ ಮುಖ ಮತ್ತು ಬಟ್ಟೆಬರೆಗಳುಕೆಟ್ಟು ಹೋದುದಲ್ಲದೆ ಬಿಸಿ ಪಾನೀಯವು ನಿರುದ್ಯೋಗಿ ಯುವಕನ ಧೋತಿಗೆ ನಸುಹಳದಿಬಣ್ಣವನ್ನು ಸೇರಿಸಿಬಿಟ್ಟಿತು. ಆದರೆಬೇಂಕಿನ ಮೇಲೆ ಹೊರಿಸಲ್ಪಟ್ಟ ಅವರ ಆರೋಪಗಳು ಸುಳ್ಳಾದರೂ,ಬೇಂಕಿನಲ್ಲಿ ಮಹಾ ಕಳವಾಗಿ ಲಕ್ಷೋಪಲಕ್ಷ ರೂಪಾಯಿಗಳು ಅನಾಮಧೇಯರ ಜೇಬಿನಲ್ಲಿ ಸುಖವಾಗಿರುತ್ತಿದ್ದ ಆ ಗೊಂದಲದ ಸಮಯದಲ್ಲಿ ಬೇಂಕಿನ ಪರಿಸ್ಥಿತಿಯು ಪ್ರತಿಯೊಬ್ಬರಿಗೂ ತಿಳಿಯುವಂತಾಯಿತು. ಈ ವರ್ತಮಾನವು ಹಲವು ತಿಂಗಳುಗಳ ತನಕ ನಾಡಿನ ಬಹು ದೊಡ್ಡ ವಿಷಯವಾಗಿ ಪರಿಣಮಿಸಿದ್ದಲ್ಲದೆ ಪ್ರತಿಯೊಬ್ಬರೂ ಅದರ ಕುರಿತು ಭಾವನೆಗೆ ನಿಲುಕಬಹುದಾದ ಎಲ್ಲಾ ಕತೆಗಳನ್ನು ಹೇಳಿ ತಮ್ಮ ಕಲ್ಪನಾ ಸಾಮ್ರಾಜ್ಯದ ಬೊಕ್ಕಸವನ್ನು ಬರಿದು ಮಾಡಿದರು.

೦೦೦ ೦೦೦ ೦೦೦

ಚಟರ್ಜಿಯು ಇವೆಲ್ಲವನ್ನು ಕಿವಿಗೊಟ್ಟು ಕೇಳುತ್ತಿದ್ದರೂ ಅವನಿಗವು ರುಚಿಸಲಿಲ್ಲ. ಸಿಕ್ಕಿದವರು ಸಿಕ್ಕಾಬಟ್ಟೆ ಮಾತಾಡುತ್ತಿರುವುದನ್ನು ಕೇಳಿ ಅವನಿಗೆ ಬೇಸರವಾಯಿತು. ಬೇಂಕಿನ ಕಳವಿನಲ್ಲಿ ಅವರಿಗೆ ಅಷ್ಟೊಂದು ಅಭಿರುಚಿಯೇಕಿರಬೇಕೆಂದು ಅವನಿಗನ್ನಿಸಿತು. ಬೇಂಕಿನಲ್ಲಿ ಹಣವಿಟ್ಟ ನಿರಪರಾಧೀ ಜನರ ಪಾಡನ್ನು ಕಂಡು ಅವರು ವಿಡಂಬನಾತ್ಮಕ ಸಹಾನುಭೂತಿಯನ್ನು ತೋರಿಸುತ್ತಿದ್ದಾರೆಂದು ಚಟರ್ಜಿಗನ್ನಿಸಿತು. ಬೇಂಕಿನಿಂದ ಹಣವನ್ನು ಅಪಹರಿಸಿದ ಕಳ್ಳನನ್ನು ಒಂದಲ್ಲ ಒಂದು ದಿನ ಹಿಡಿದಾರು—... ಆದರೆ ನಿಜವಾಗಿಯೂ ಅವನನ್ನು ಹಿಡಿಯಲು ಸಾಧ್ಯವಿದೆಯೇ? ಈ ಮೌನ ಪ್ರಶ್ನೆಯು ಅವನ ನರನಾಡಿಗಳಲ್ಲಿ ರಕ್ತವು ವೇಗವಾಗಿ ಸಂಚರಿಸುವಂತೆ ಮಾಡಿತು. ಪೋಲೀಸರ ಕೈಯ್ಯಿಂದ ತಪ್ಪಿಸಿಕೊಳ್ಳುವ ಚತುರ ಕಳ್ಳನ ಚಿತ್ರವು ಅವನ ಕಣ್ಣೆದುರು ಬಂದು ನಿಂತಿತು. ಅಂದಿನ ಪತ್ರಿಕೆಗಳಲ್ಲಿ ಪ್ರಕಟವಾದ ಬೇಂಕರನ ಭಾವ ಚಿತ್ರವನ್ನವನು ನೋಡಿದ. ಅವನ ಮುಖಚರ್ಯೆಯನ್ನು ಪರೀಕ್ಷಿಸಿದ. ತೆಳು ದೇಹ, ಅಚ್ಚುಗಟ್ಟಿನ ಮುಖವಾದರೂ ನರೆತ ಕೂದಲುಗಳು, ಚಾತುರ್ಯವನ್ನು ತೋರಿಸುವ ಮುಂದಲೆ, ಉದ್ದ ಮೂಗು, ದಪ್ಪವಾದ ಹುಬ್ಬುಗಳು,—ಇವೆಲ್ಲವೂ ಕೇಡಿಯ ಮುಖ ಲಕ್ಷಣಗಳಲ್ಲ. ದೃಢ ಮನಸ್ಸಿನ ವ್ಯಕ್ತಿಯೊಬ್ಬನದೆಂದು ಚಟರ್ಜಿಗೆ ಖಚಿತವಾಯಿತು. ಅವನೆಲ್ಲಿ ಅಡಗಿಕೊಂಡಿರಬಹುದು? "ವಜೀರಿಸ್ಥಾನದಲ್ಲಿ ಬ್ರಿಟಿಷರಿಗೂ ಪಠಾಣರಿಗೂ ಪ್ರಚಂಡ ಯುದ್ಧ ನಡೆಯುತ್ತಿದೆ. ಅವನು ಚತುರನಾಗಿದ್ದರೆ ಇಫಿ ಫಕೀರನೊಡನೆ ಸೇರಿಕೊಳ್ಳಬಾರದೇಕೆ?" ಎಂದು ಚಟರ್ಜಿ ತನ್ನಲ್ಲೇ ಪ್ರಶ್ನಿಸಿಕೊಂಡ. ಸ್ವಲ್ಪ ಸಮಯದ ಬಳಿಕ ಅವನಿಗಾ ವಿಚಾರವಲ್ಲಿದ್ದ

ಅಭಿರುಚಿಯು ಕಡಿಮೆಯಾಯಿತು. ಒಬ್ಬೊಬ್ಬರೇ ಹೊಟೆಲಿಗೆ ಬಂದಂತೆ ಮಾತುಕತೆಯು ಅವ್ಯಾಹತವಾಗಿ ನಡೆಯಲಾರಂಭಿಸಿತು. ಚಟರ್ಜಿಗೆ ಬೇಸರವಾಗಿ ಹೊಟೆಲಿನ ಹಣ ಕೊಟ್ಟು ಅವನು ಹೊರನಡೆದೇ ಬಿಟ್ಟ.

"ಭಾರತೀಯರೆಂದರೆ ಮಾತಿನ ಮಲ್ಲರು" ಬೀದಿಗಳಲ್ಲಿ ನಡೆಯುತ್ತಿದ್ದಾಗ ಚಟರ್ಜಿಯು ಮಾಡಿಕೊಂಡ ಸ್ವವಿಮರ್ಶೆಯಿದು. ಗಂಗಾನದಿಯ ತೀರದಲ್ಲಿ ಒಂದೆರಡು ತಾಸು ಅಲೆದಾಡುವುದು ವಿಹಿತವೆಂದು ಚಟರ್ಜಿ ಗನಿಸಿತು. "ನಮ್ಮಲ್ಲಿ ಶಕ್ತಿಯೇ ಇಲ್ಲ; ನಮ್ಮ ನಾಡು ಧರ್ಮಗಳ ಬೀಡು ಎಂದು ಹೇಳಲ್ಪಟ್ಟರೂ ಆಧ್ಯಾತ್ಮಿಕ ಮನೋವೃತ್ತಿಗೆ ನಮ್ಮಲ್ಲಿ ಬರಗಾಲ ಬಂದಿದೆ"ಧರ್ಮ, ಸಮಾಜ, ಪದ್ಧತಿ, ಇವೆಲ್ಲವುಗಳು ಅವನ ಜೀವನದಲ್ಲಿ ಎಂತಹ ಮಾರ್ಪಾಟಗಳನ್ನು ಮಾಡಿರಬಹುದು? ಅವುಗಳು ಸಮಾಜದ ಮೇಲೆ ನಡೆಸುವ ನಿರಂಕುಶ ಅಧಿಕಾರಗಳಲ್ಲದಿದ್ದರೆ ಅವನು ಬೀದಿಗಳಲ್ಲಿ ನಿರಾಶನಾಗಿ ಅಂಡಲೆಯುತ್ತಿದ್ದಿಲ್ಲ. ಅವುಗಳಲ್ಲದಿದ್ದರೆ ಅವನು ಎಲ್ಲಾದರೂ ಕಾಯವಾಗಿ ನಿಂತು ಸಾಮಾನ್ಯ ಮನುಷ್ಯರಂತೆ ಜೀವಿಸುತ್ತಿದ್ದ. ವೈವಾಹಿಕ ಜೀವನದ ಕಷ್ಟಸುಖಗಳಲ್ಲಿ ಅವನು ಭಾಗಿಯಾಗುತ್ತಿದ್ದ. ಅನಿರೀಕ್ಷಿತವಾಗಿ ಅವನ ಭಾವನೆಯು ಕಾಲಚಕ್ರವನ್ನು ಏಳು ವರುಷಗಳಷ್ಟು ಹಿಂದೆ ತಿರುಗಿಸಿಬಿಟ್ಟಿತು. ಆಗ ಚಟರ್ಜಿಯು ಕಾಲೇಜಿನ ಒಬ್ಬ ಚತುರ ವಿದ್ಯಾರ್ಥಿಯಾಗಿದ್ದ. ತಾರುಣ್ಯದ ಸವಿಗನಸುಗಳು ಅವನ ಮನೋಸಾಮ್ರಾಜ್ಯವನ್ನು ತುಂಬಿದ್ದುವು. ಯಶಸ್ಸಿನ ತುತ್ತತುದಿಗೇರುವ ಮಹತ್ವಾಕಾಂಕ್ಷೆಯು ಅವನಲ್ಲಿತ್ತು. ಈ ಯಶಸ್ಸು ಬೇಕಾದುದು ಅವನಿಗೆ ಮಾತ್ರವಲ್ಲ- ಅವನು ಪೂರ್ಣವಾಗಿ ಪ್ರೀತಿಸುತ್ತಿದ್ದ ಅವನೊಲವಿನ ಚೆನ್ನೆಗಾಗಿ- ಹಳೆಯ ನೆನಹಿನ ಚಿತ್ರಪಟವು ಅವನ ಭಾವನಾದೃಷ್ಟಿಯ ಮುಂದೆ ಚಲಿಸುತ್ತಿದ್ದಾಗ ದಾರಿಯಲ್ಲಿ ವೇಗವಾಗಿ ಬರುತ್ತಿದ್ದ ಟ್ರಾಮ್ ಬಂಡಿಯು ಕೂಡಾ ಅವನಿಗೆ ಕಾಣಿಸಲಿಲ್ಲ. ಅವನೆದುರು ಏಕಮಾತ್ರಚಿತ್ರವು ಕಾಣುತ್ತಿತ್ತು. ಹದಿನೇಳು ವರುಷದ ಮುದ್ದು ಕುವರಿಯ ಆ ಮಲಿನವಾದ ಮುಖ, ಗುಂಗುರುಗುಂಗುರಾದ ನೀಳ ಕೇಶರಾಶಿ, ಮುಂತಲೆಯಲ್ಲಿ ಅಸ್ತವ್ಯಸ್ತವಾಗಿದ್ದ ಆ ಕೆನ್ನೆಯ ಕೂದಲು, ಬೊಗಸೆ ಕಣ್ಣುಗಳು!

ಅವನೂ ಅವಳೂಒಂದೇ ಗ್ರಾಮದಲ್ಲಿ ಹುಟ್ಟಿದವರು. ನೆರೆಹೊರೆಯವರು. ಒಂದೇ ಶಾಲೆಯಲ್ಲಿ ಕಲಿತವರು. ಎರಡು ಮೈಲುಗಳ ದಾರಿಯಲ್ಲಿ ಒಟ್ಟಿಗೆ ನಡೆದು ಶಾಲೆಗೆ ಹೋಗುತ್ತಿದ್ದವರು. ಆ ಂದಿನ ಮಧುರ ಕತೆಗಳು- ಚಟರ್ಜಿಯು ಆಕೆಗೆ ಜಗತ್ತಿನ ವಿವಿಧ ಭಾಗಗಳಲ್ಲಾದ ರೋಮಾಂಚಕ ಕತೆಗಳನ್ನು ಹೇಳುತ್ತಿದ್ದ. ಆ ಸಾಹಸಮಯ ಜಗತ್ತನ್ನು ಕಣ್ಣಾರೆ ಕಾಣಬೇಕೆಂಬ ಆಶೆಯ ಬೀಜವು ಚಿಕ್ಕಂದಿನಲ್ಲಿಯೇ ಅವನ ಹೃದಯದಲ್ಲಿ ಬಿತ್ತಲ್ಪಟ್ಟಿತ್ತು. ಶಾಲೆಯಲ್ಲಿ ಚಿಕ್ಕ ಹುಡುಗಿಯೊಬ್ಬಳು ತನ್ನ ಗೆಳೆಯನನ್ನು ಪ್ರೇಮಿಸುವುದು ನಿಜವೆಂದಾದರೆ ಸರಲೆ ಚಟರ್ಜಿಯನ್ನು ಪೂರ್ಣವಾಗಿ ಪ್ರೀತಿಸುತ್ತಿದ್ದಳು. ಅವರಿಬ್ಬರ ಪ್ರೇಮವು ಸಹಜವಾಗಿತ್ತು. ಇವರ ಮನೋವೃತ್ತಿಯು ಒಂದಾಗಿತ್ತು. ಈ ಪ್ರೇಮದ ಪರಿಣಾಮವಾಗಿ ಅವರು ಮಧುರ ಜೀವನ ನಡೆಸುವ ದಂಪತಿಗಳಾಗಬೇಕಿತ್ತು. ದೈವವು ವಿರೋಧವಾಗಿದ್ದರೆ ಅದನ್ನವರು ಪಡೆಯುತ್ತಿದ್ದರು. ಆದರೆ ಹೇಯವಾದ ಮಾನವ ನಿರ್ಮಿತ ಪದ್ಧತಿಯು ಅವರ ಜೀವನ ವೃತ್ತಿಯ ನೇಣನ್ನು ಕಡಿದುಹಾಕಿತು. ಅವರು ಒಂದೇ "ಗೋತ್ರ"ಕ್ಕೆ ಸೇರಿದ್ದುದೇ ಅವರ ವಿವಾಹಕ್ಕೆ ಮಹಾ ತೊಡಕಾಯಿತು. ಸರಲೆಯು ತನ್ನ ದೌರ್ಭಾಗ್ಯಕ್ಕಾಗಿ ಶಾಂತವಾಗಿ ಮರುಗಿದಳು. ಅದೆಷ್ಟೋ ಬೆಳ್ದಿಂಗಳ ರಾತ್ರಿಗಳಲ್ಲಿ ನಭೋಮಂಡಲದ ಅಗಣಿತ ತಾರೆಗಳನ್ನು ಕಂಡು ಜಗತ್ತಿನಲ್ಲಿ ಯಾವನಾದರೊಬ್ಬ ಪುರುಷನು ತನ್ನ ಕೈಹಿಡಿಯುವುದಿದ್ದರೆ ಅದು ರಮಾನಾಥ ಚಟರ್ಜಿಯೆಂದು ಆಕೆಯು ದೃಢ ನಿರ್ಧಾರವನ್ನು ಮಾಡಿಬಿಟ್ಟಳು. ಚಟರ್ಜಿಯು ಕಾಲೇಜಿನಿಂದ ಹಿಂದೆ ಬಂದಾಗ ಸರಲೆಯು ಹೊಸ ವಿವಾಹ ಸೂಚನೆಗಳನ್ನು ಅವನಿಗೆ ತಿಳಿಸಿ ಮುಂದೆ ಬರಬಹುದಾದ ವರನ ಕಡೆಯವರಿಗೆ ಹೇಗೆ ತಮಾಷೆಮಾಡಿ ಹೀಯಾಳಿಸುವದೆಂಬುದನ್ನು ಹೇಳುವಳು. ತಾರಾಮಂಡಲದೆದುರು ತಾನು ಮಾಡಿರುವ ಶಪಥವನ್ನು ಅವನಿಗೆ ತಿಳಿಸುವಳು. ಚಟರ್ಜಿಗೆ ಈ ಮಧುರ ಆಶ್ವಾಸನೆಗಳು ಪೂರ್ಣಾನಂದವನ್ನು ಕೊಡುತ್ತಿದ್ದವು. ಆಕೆಯನ್ನಗಲಿ ಹೋಗುವ ಮೊದಲು ಗೋತ್ರವೇ ಮೊದಲಾದ ಶುಷ್ಕ ಪದ್ಧತಿಗಳ ಕುರಿತು ಸರಲೆಗೆ ಸುದೀರ್ಘವಾದೊಂದು ಪ್ರಚಂಡ ಭಾಷಣವನ್ನು ಕೊಟ್ಟು ಹೋಗುವುದು ಚಟರ್ಜಿಯ ದಿನ

ಚರಿಯ ಕರ್ತವ್ಯಗಳಲ್ಲೊಂದಾಗಿತ್ತು.

ಆದರೇನು? ಸರಲೆಯು ಜಗತ್ತಿನ ಅನುಭವವಿಲ್ಲದ ಚಿಕ್ಕ ಹುಡುಗಿ. ಸನಾತನೀ ಪದ್ಧತಿಗಳು ಶತಮಾನ ಶತಮಾನದ ಅಂಧಶ್ರದ್ಧೆಯ ತಳಹದಿಯ ಮೇಲೆ ಕಟ್ಟಲ್ಪಟ್ಟ ಕತ್ತಲೆಯ ಗುಡಿಗಳೆಂದು ಆಕೆಗರಿತಿದ್ದಿಲ್ಲ. ತಂದೆಯ ಬೆದರಿಕೆಗಳು ಅವಳನ್ನು ನಡುಗಿಸುತ್ತಿದ್ದವು. ತಾಯಿ ತನ್ನ ಮಾತೃಸಹಜ ರೀತಿಯಲ್ಲಿ ಆಕೆಯನ್ನು ಮುದ್ದಿಟ್ಟು ಮಧುರ ಭಾಷಣವನ್ನು ಕೊಡುತ್ತಿದ್ದಳು. ಸಂಬಂಧಿಕರು ನಿಷೇಧಿಸಲ್ಪಟ್ಟ ವರ್ಗದ ಹುಡುಗನನ್ನು ಮದುವೆಯಾಗಿ ಮನೆತನದ ಹೆಸರಿಗೆ ಕಳಂಕವನ್ನು ತರಬಾರದೆಂದು ತಮ್ಮ ಬುದ್ಧಿವಾದಗಳನ್ನು ಕೊಡುತ್ತಿದ್ದರು! ತಲೆಬಗ್ಗಿಸಿ, ಸಮಾಜದ ಪದ್ಧತಿಗೆ ಬಲಿಬಿದ್ದು, ಒತ್ತಾಯ ಪೂರ್ವಕವಾಗಿ ಆಕೆಯು ಕ್ಷಯ ಪೀಡಿತನಾದೊಬ್ಬ ಪುರುಷನೊಡನೆ ಪ್ರೇಮಭಿಕ್ಷೆಯನ್ನು ಬೇಡಬೇಕಾಯಿತು. ಅವನನ್ನು ಪ್ರೀತಿಸುವುದು ಅಸಾಧ್ಯವೆಂಬುದು ಆಕೆಗೆ ಪೂರ್ಣವಾಗಿ ತಿಳಿದಿತ್ತು. ಆದರೆ ನಿಸರ್ಗಕ್ಕೆ ಮನುಷ್ಯನ ಕಷ್ಟಸಂಕಷ್ಟಗಳ ಅರಿವಿಲ್ಲ. ಅದು ತನ್ನ ಕ್ರೂರ ಹೆಜ್ಜೆಯನ್ನು ಕೆಲವೊಮ್ಮೆ ಕಮನೀಯ ಪುಷ್ಪಗಳ ಮೇಲೆ ನಿಷ್ಕರುಣೆಯಿಂದಿಟ್ಟು, ಅವುಗಳ ಸೌಂದರ್ಯವನ್ನು ಕೆಡಿಸುತ್ತದೆ. ಐದು ವರುಷಗಳ ತನಕ ಆ ದಂಪತಿಗಳು ಒಟ್ಟಿಗೆ ಜೀವಿಸಿ ಈ ಜಗತ್ತಿನ ಬೆಳಕನ್ನು ಕಾಣಲು ತಂದೆಯಂತಹ ಕ್ಷಯ ಪೀಡಿತ ಶಿಶುವೊಂದನ್ನು ಹುಟ್ಟಿಸಿದರು. ಇದಾದೊಡನೆಯೇ ತಂದೆ ಕಾಲಾಧೀನನಾಗಿ ಸರಲೆಯು ಓರ್ವ ವಿಧವೆಯಾಗಬೇಕಾಯಿತು. ತಾರುಣ್ಯದ ಪ್ರಥಮ ಹೊಸ್ತಿಲಲ್ಲಿ ಕಾಲಿಟ್ಟ ನಯನ ಮನೋಹರಳಾದ ತರುಣಿಯು ವೈಧವ್ಯದ ಬಿರುಸುಗಳಿಗೆ ತನ್ನ ಎದೆಯನ್ನೊಡ್ಡಬೇಕಾಯಿತು.

ಚಟರ್ಜಿಗೆ ಜಗತ್ತಿನಲ್ಲಿರುವ ಇನ್ನಾವ ತರುಣಿಯೂ ನಿಜವಾದ ಸುಖವನ್ನೀಯಲಾರಳು. ತನ್ನಿಂದ ದೂರವಾದ ರತ್ನದ ಸೌಂದರ್ಯವನ್ನು ಅವನು ಉಪಭೋಗಿಸದಂತಾಯಿತು. ಮನುಷ್ಯಕೃತ ಪದ್ಧತಿಗಳ ಕ್ರೂರ ಪ್ರಭಾವವು ಅವನ ನೂರಾರು ಕನಸುಗಳನ್ನು ನುಚ್ಚುನೂರುಗೊಳಿಸಿ, ಅವನ ಸುಖಸಾಮ್ರಾಜ್ಯವನ್ನು ಹಾಳುಗೆಡವಿತ್ತು. ಮಿಕ್ಕುಳಿದುವು ಅವನಿಗೆ ಬೇಕಾಗಿದ್ದಿಲ್ಲ. ಅಂದಿನಿಂದ ಅವನಲ್ಲಿ ಶಾಂತಿಯೆಂಬುದಿಲ್ಲ. ಧ್ಯೇಯವಿಲ್ಲದೆ, ತನ್ನ ಜೀವನದ ಬೆಂಗೋಲನ್ನೇ ಕಳೆದುಕೊಂಡವನಂತೆ ಅವನು ನಿಸ್ತೇಜನಾಗಿ, ಅಂಡಲೆಯಲಾರಂಭಿಸಿದ. ಯಾರಿಗಾಗಿ ಅವನು ದುಡಿಯಬೇಕು? ಸುಖಸ್ವಪ್ನಗಳನ್ನು ಅವನಾವುದಕ್ಕಾಗಿ ಪೂರೈಸಬೇಕು? ಅವನಿಗೆ ಯಾವುದೂ ಬೇಕಾಗಿದ್ದಿಲ್ಲ. ಜಗತ್ತು ಹುಚ್ಚರಿಂದ ತುಂಬಿರುವ ಒಂದು ನಾಟಕಶಾಲೆಯಂತೆ ಅವನಿಗೆ ಕಾಣಿಸುತ್ತಿತ್ತು. ಅವನು ನಡೆಯುತ್ತಿರುವ ಈ ಬೀದಿಯಾವುದು? ಈ ಬೀದಿಯೆಷ್ಟು ಕೊಳಕಾಗಿದೆ?...ಭೀಕರ ಮುಖಭಾವದಿಂದ ವೇಶ್ಯಾಗೃಹವನ್ನು ಪ್ರವೇಶಿಸುವ ಈ ವ್ಯಕ್ತಿ ಯಾರು? ಅವನನ್ನು ಚಟರ್ಜಿಯು ಎಲ್ಲಿ ಕಂಡಿರಬಹುದು......ಸರಿ....ಅಷ್ಟು ಬೇಗನೆ ಇವನನ್ನು ಅವನಿಗೆ ಕಾಣಲು ಸಾಧ್ಯವಾದುದು ಆಶ್ಚರ್ಯವಲ್ಲವೆ? ಚತುರನಿದ್ದಾನೆ. ಯೋಗ್ಯವಾಗಿ ವೇಷ ಬದಲಾಯಿಸಿಕೊಂಡಿದ್ದಾನೆ. ಆದರೆ ಇದೆಲ್ಲ ಸಾಕು—ಚಟರ್ಜಿಯು ತನ್ನಲ್ಲಿ ಭಾವಿಸಿಕೊಂಡ. ಧೈರ್ಯದಿಂದ ಆ ಮನೆಯೊಳಗೆ ಪ್ರವೇಶಿಸಿ, ಅವನನ್ನು ಪೋಲೀಸರ ಕೈಗೆ ಕೊಟ್ಟರೆ ಎಂತಹ ಸ್ವರ್ಣ ಸಂದರ್ಭ ಸಿಗಬಹುದು? ಆದರೆ?... ಪಾಪ, ಅವನ ಸುಖವನ್ನೇಕೆ ಕೆಡಿಸಬೇಕು? ಆ ವೇಶ್ಯೆಯ ಕೃತಕಾಲಿಂಗನದ ಕೃತಕ ಚುಂಬನದ ಸವಿಯನ್ನು ಅವನೇಕೆ ಪಡೆಯಬಾರದು? ಆಕೆಗೆ ತಾನೆಂಥವನನ್ನು ಆಲಿಂಗಿಸುತ್ತಿರುವೆನೆಂಬ ಪರಿಚಯವು ಇರಬಹುದೇ? ಎಂದವನು ಪ್ರಶ್ನಿಸಿದ. ಆಲಿಂಗನದ ಆಲೋಚನೆಯು ಅವನಿಗೆ ತಮಾಷೆಯೆನಿಸಿತು. ತಡೆಯಲಾರದೆ ಚಟರ್ಜಿಯು ನಗಾಡಿಬಿಟ್ಟ. ತನ್ನಷ್ಟಕ್ಕೆ ನಗುತ್ತಿರುವ ಚಟರ್ಜಿಯನ್ನು ದಾರಿಹೋಕರು ಕಂಡು ಹುಚ್ಚನಾಗಿರಬೇಕೆಂದು ಭಾವಿಸಿದರು. ಶಿಳ್ಳು ಹೊಡೆಯುತ್ತಾ ಚಟರ್ಜಿ ಮುನ್ನಡೆದ.

ooo ooo ooo

ಗಂಗಾನದಿಯ ತೀರದ ಪ್ರಶಾಂತ ವಾತಾವರಣವು ಅವನಿಗೆ ಸುಮಧುರವೆನಿಸಿತು. ಪವಿತ್ರ ಜಾಹ್ನವಿಯು ಶಾಂತವಾಗಿ ಹರಿಯುತ್ತಿದ್ದಳು. ಆಳವಾದ ಆ ನೀರಿನ ಮೇಲೆ ಅರೆ ಹಳದಿ ಬಣ್ಣದ ಚಂದ್ರನ ಬಿಂಬವು ಪ್ರತಿಬಿಂಬಿಸಿತ್ತು. ಚಟರ್ಜಿಯು ನಿಂತ ಒಂದೆರಡು ಮಾರುಗಳ ದೂರದಲ್ಲಿರುವ ಆಲದ ಮರದಡಿಯಲ್ಲಿ ಭಿಕ್ಷುಕ

(೪೩ನೆ ಪುಟ ನೋಡಿರಿ)



ನಿಮ್ಮನ್ನು ಹೆದರಿಸುವ ಆ ಜೈಲು!

# ಮನೆ ಮಾತಾಗಿರುವ 'ಕನ್ನಾನೂರು'

ಢಕಾಯಿತಿನ ತಕ್ಷೀರಿಗೊಳಗಾಗಿ ಏಳು ವರ್ಷ ಕಠಿನ ಶಿಕ್ಷೆ ಪಡೆದು ಮದ್ರಾಸ್ ಪ್ರಾಂತ್ಯದ ಬೇರೆ ಬೇರೆ ಜೈಲುಗಳಲ್ಲಿದ್ದು ಬಂದವರೊಬ್ಬರ ಆತ್ಮಕಥೆಯಿದು.

**ಲೇಖಾಂಕ ೬**

**ಮೊದಲ ರಾತ್ರಿ**

ಏಳು ವರುಷಗಳ ನನ್ನ ಪಾಲಿನ ಯುಗದ ಮೊದಲನೇ ರಾತ್ರಿಯನ್ನು ಸಬ್‌ಜೈಲಿನಲ್ಲಿ ಕಳೆದೆನೆಂದು ಕಳದವಾರ ತಿಳಿಸಿದೆನಷ್ಟೆ. ಆ ರಾತ್ರಿ ನಾನು ಪಡುತ್ತಿದ್ದ ಸಂಕಟ ವನ್ನು ಬೇರೆ ವರ್ಣಿಸಲಾರೆ. ಹೆಚ್ಚೇನು? ಏಳು ವರ್ಷಗಳನ್ನು ಜೈಲನ್ನವನ್ನುಂಡು ಕಳೆದು ನಾನು ಇನ್ನೊಮ್ಮೆ ಹೆಂಡತಿ ಮತ್ತು ತಾಯಿ ಯ ಮೊಗನೋಡುವೆನೋ ಇಲ್ಲವೋ ಎಂದು ಹಂಬಲಿಸುತ್ತಿದ್ದೆ. ಅಥವಾ ಆ ಹಂಬಲಿಲ್ಲದಿರುತ್ತಿದ್ದರೂ ಬೇರೆ ಸುಖವನ್ನನುಭವಿಸಲಿಕ್ಕೇ ನಿತ್ತು ಆ ಜೈಲಿನಲ್ಲಿ? ಅಲ್ಲಿಯ ಸ್ಥಳ, ಅನ್ನ, ವಸ್ತ್ರ, ಸಂಗಾತಿಗಳು-ಎಲ್ಲ ವೂ ಗೋಳಾಡುತ್ತಲೇ ಇದ್ದವು. ನನಗೆ ಇನ್ನು ಮುಂದಕ್ಕೆ ಮನೆ ಯವರನ್ನು ನೋಡಲಿಕ್ಕಿಲ್ಲವಲ್ಲಾ ಎಂಬ ಸಂತಾಪ; ಅಲ್ಲಿದ್ದ ಇತರರಿಗೆ ಮನೆಯವರನ್ನು ಕಂಡು ಕಾಲ ವೆಷ್ಟಾಯಿತಯ್ಯೋ ಎಂಬ ಸಂಕಟ! ಹೀಗೆ ಒಳಗೂ ಹೊರಗೂ ಗೊಂದ ಲವೇ ಗೊಂದಲವಾಗಿದ್ದ ಆ ದೊಡ್ಡ ಕೋಣೆಯಲ್ಲಿ ಇಡೀ ರಾತ್ರಿಯನ್ನು ನಿದ್ದೆಯಿಲ್ಲದೇನೆ ಕಳೆದೆ.

**ಬೆಳಗ್ಗಿನ ಶಿಸ್ತು**

ಬೆಳಗ್ಗೆ 5½ ಘಂಟೆ ಹೊತ್ತಿಗೆ ಒಬ್ಬನೆದ್ದು 'ರೈಸ್' ಎಂದು ಕೂಗಿದ. ಅವನೇಕನ್ನುತ್ತಾನೋ- ನನಗರಿಯ ಲಿಲ್ಲ. ಆ ಶಬ್ದವೆದ್ದಂತೆಯೇ ಕೋ ಣೆಯಲ್ಲಿದ್ದವರೆಲ್ಲರೂ ಎದ್ದುದನ್ನು ಮಾತ್ರ ಕಂಡೆ. ನಮ್ಮ ಪೈಕಿ ಸುಖ ಜೀವಿಯೆಂದರೆ ಅಹಮ್ಮದ. ನನ್ನ ಮತ್ತು ಸೋಜನ ತಲೆ ಇಡೀ ರಾತ್ರಿ 'ಫಿರ್‍ರ್' ತಿರುಗುತ್ತಿತ್ತಾದರೆ, ಅಹ ಮ್ಮದನ ಮೂಗು ಮತ್ತು ಬಾಯಿ 'ಘೊರ್‍ರ್' ಎನ್ನುತ್ತಿತ್ತು! ಎಂಥಾ ಪ್ರಾಣಿಯೋ ಆತ! ನಾನು ಎದ್ದು ಅಹಮ್ಮದನ ಮೈ ತಟ್ಟಿ ಎಬ್ಬಿಸ ಬೇಕಾದರೆ ಮೂರು ಮಿನಿಟು ತಾಗಿತು. ನಾವೊಂದು ಶಿಸ್ತನ್ನನು ಸರಿಸಿದ್ದೆವು. ಜೈಲಧಿಕಾರಿಗಳ 'ರೈಸ್ ಗ್ರೈಸ್' ನಮಗರ್ಥವಾಗು ತ್ತಿದ್ದಿಲ್ಲ. ನಮ್ಮ ಪೂರ್ವಜರು- ಅಂದರೆ ನಮಗಿಂತ ಮೊದಲು ಕೈದಿ ಜನ್ಮಕ್ಕೆ ಬಂದವರು- ಹೇಗೆ ಮಾಡು ತ್ತಾರೋ ಹಾಗೆ ಮಾಡುವದೊಂದ ನ್ನು ನಮ್ಮ ಧರ್ಮವಾಗಿ ಇಟ್ಟು ಕೊಂಡಿದ್ದೆವು. ಎಲ್ಲರೂ ತಮ್ಮ ತಟ್ಟೆ, ಬಟ್ಟಲುಗಳನ್ನು ಹಿಡಿದು ಕೊಂಡು ಎದ್ದು ಕುಳಿತರು, ನಾವೂ ಹಾಗೆಯೇ ಕುಳಿತೆವು. ಸ್ವಲ್ಪ ಹೊತ್ತಿನಲ್ಲಿ ವಾರ್ಡರ್ ಬಂದು ಕೋಣೆಯ ಬೀಗ ತೆಗೆದ. 'ರೈಸ್' ಆಯಿತು. ಎಲ್ಲರೂ ದಡಬಡನೇ ಎದ್ದು ಬ್ಲೋಕಿನಿಂದ ಹೊರಬಂದು ಅಂಗಳದಲ್ಲಿ ಸಾಲಾಗಿ ಕುಳಿತರು. ಅಲ್ಲಿ ಪ್ರಥಮತಃ 'ರೈಸ್' ಆ ಮೇಲೆ 'ಮಾರ್ಚ್' ಎಂದ ವಾರ್ಡರ್. ಎಲ್ಲರೂ ಸಾಲಾಗಿ ಅಂಗಳದ ಮೂಲೆ ವರೆಗೆ ಹೋಗಿ ತಟ್ಟೆ ಬಟ್ಟಲುಗಳನ್ನು ಒಂದೆಡೆಯಲ್ಲಿಟ್ಟು ಪಾಯಿಖಾನೆಗೆ ಹೋದೆವು. ಬಾವಿ ಯಿಂದ ಒಟ್ಟಾಗಿ ನೀರೆಳೆದು ಮುಖ ತಟ್ಟೆಗಳನ್ನು ತೊಳೆದು, ಪುನಃ ಹಾಗೆಯೇ ಬಂದು ಸಾಲಿನಲ್ಲಿ ಕುಳಿತುಕೊಳ್ಳಬೇಕು. ಯಾರಾದ ರೊಬ್ಬ ಸಾಲು ತಪ್ಪಿದ ನೆಂದು ಭಾವಿಸಿಕೊಳ್ಳಿ ಆಗ ಸಾಲನ್ನು ಸರೀಮಟ್ಟಕ್ಕೆ ತರುವ ಕ್ರಮ ಹೇಗೆ ಗೊತ್ತುಂಟೆ? ನೀವು ಗೋಡೆಗೆ ಸಾಲಾಗಿ ಕಲ್ಲುಗಳನ್ನಿ ಡುತ್ತಾ ಹೋಗುವಾಗ, ಇಲ್ಲವೇ ಊಟದ ಪಂಗ್ತಿಗೆ ಸಾಲ್ಮಣೆಗಳನ್ನು ಇಡುವಾಗ ಹಿಂದೆಮುಂದೆ ಆದಲ್ಲ ಏನು ಮಾಡುವಿರಿ? ಕಲ್ಲಿನ ಅಥವಾ ಮಣೆಯ ತಲೆಗೊಂದು ತಟ್ಟಿಯೋ ದೂಡಿಯೋ ಸಾಲು ಸರಿ ಮಾಡು ವಿರಲ್ಲವೆ? ಜೈಲಿನಲ್ಲಿ ಕೂಡಾ ಹಾಗೆಯೇ. ಸಾಲು ಬಿಟ್ಟವನ ತಪ್ಪನ್ನು ಮತ್ತು ಆ ಸಾಲನ್ನು ಜೈಲ

ಧಿಕಾರಿಗಳು ಕೈಯಿಂದ ಝಾಡಿಸಿ ಹೊಡೆದು ಅರೆಕ್ಷಣದಲ್ಲಿ ಸರಿಪಡಿಸಿ ಬಿಡುವರು. ನಿಮ್ಮ ಲೋಕದಲ್ಲಿ ಮನುಷ್ಯರು ಮನುಷ್ಯರನ್ನು ಹೆಚ್ಚಾಗಿ ಬಾಯಿಯಿಂದಲೇ ಸಂಬೋಧಿಸುತ್ತಾರಾದರೆ, ನಮ್ಮ ಜೈಲು ಲೋಕದಲ್ಲಿ ಆ ಕೆಲಸವನ್ನು ಮಾಡುವದು ಕೈಗಳು. ತಿಳಿಯಿತಲ್ಲಾ, 'ಹೀಗೆ ಸಾಲು ಸರಿ ಮಟ್ಟಕ್ಕೆ ನಿಂತಿತು' ಎಂದಾದೊಡನೆ ವಾರ್ಡರನು 'ಡೌನ್' ಎನ್ನುವನು. ಆಗ ಎಲ್ಲರೂ ಸಡಕ್ಕನೆ ಕುಳಿತುಕೊಳ್ಳಬೇಕು. ಕೈದಿಗಳ ದುರದೃಷ್ಟದಿಂದ, ಪೂರ್ವಜನ್ಮದಲ್ಲಿ ಉಪಾಧ್ಯಾಯರಾಗಿದ್ದು, ಅರ್ಧದಲ್ಲೇ ಕೆಲಸದಿಂದ ತೆಗೆದು ಹಾಕಲ್ಪಟ್ಟವರು, ಈ ಜನ್ಮದಲ್ಲಿ ವಾರ್ಡರರಾಗಿ ಅವತರಿಸುವದುಂಟು. ಅಂಥವರು ಪೂರ್ವಜನ್ಮದ ವಾಸನೆಯ ಬಲದಿಂದ, 'ರೈಸ್ ಡೌನ್' 'ರೈಸ್ ಡೌನ್' ಎಂದು ಏಳೆಂಟು ಸಲವೂ, ಕೈದಿಗಳನ್ನು ಕೂಡ್ರಿಸಿ ಎಬ್ಬಿಸಿ, ಹಿಂದಿನ ಜನ್ಮದ ಉಪಾಧ್ಯಾಯತನದಲ್ಲಿಬಾಕಿಯಾಗಿದ್ದ 'ಸಿಟ್‌ಸ್ಟೇಂಡ್' ಭಾಗವನ್ನು ಈ ಜನ್ಮದಲ್ಲಿ ಭರ್ತಿ ಮಾಡಿಕೊಳ್ಳುವದುಂಟು. ಈ ವ್ಯಾಯಾಮವನ್ನು ಕೊನೆಯ 'ಡೌನ್' ಹೇಳಿ ಒಮ್ಮೆ ವಾರ್ಡರನು ಮುಗಿಸುತ್ತಾನೆನ್ನಿ.

### ಗಂಜಿ ಮತ್ತು ಚಟ್ಣಿ

ಆಗ ತಟ್ಟೆ ಮತ್ತು ಬಟ್ಟಲನ್ನು ಮುಂದೂಡಿ ಕುಳಿತರಾಯಿತು. ಅಥವಾ ಬೆಳಗಿನ ಹೊತ್ತಿಗೆ ಬರೇ ಬಟ್ಟಲನ್ನುಮಾತ್ರವಿಟ್ಟರೂ ಸಾಕು. ದೊಡ್ಡದೊಂದು ಕೊಂಡೆಯಲ್ಲಿ ಒಂದೊದು ಕೊಂಡೆ ಗಂಜಿ ಬಟ್ಟಲಿಗೆ ಬೀಳುವದು. ಹೂಬಿಟ್ಟು ಒಂದು ತಿಂಗಳಾದಾಗ ಮಾವಿನ ಮರದಲ್ಲಿ ಮಿಡಿಬೀಳುತ್ತದಲ್ಲಾ- ಆ ಮಿಡಿಯ ಗಾತ್ರದಷ್ಟು ದೊಡ್ಡದಾದ ಒಂದು ಮುದ್ದೆ ಚಟ್ಣಿಯೂ ಆ ಗಂಜಿಯೊಟ್ಟಿಗೇನೆ ಬರುತ್ತದೆ. ಬಟ್ಟಲಿನ ಗಂಜಿಯ ಕಡೆಗೆ ಬಹಳ ಜಾಗ್ರತೆ ಬೇಕು; ಅದೇ ಸಮಯದಲ್ಲಿ ಮೇಲಿನಿಂದ ಬೀಳುವ ಚಟ್ಣಿ ಮುದ್ದೆಯನ್ನು ತಪ್ಪದೆ ಹಿಡಿಯಲು, ಫೂಟ್‌ಬೋಲ್ ಮೇಚಿನಲ್ಲಿ ಗೋಲ್‌ಕೀಪರನಿಗಿರಬೇಕಾದಷ್ಟೇ, ಮುಂಜಾಗ್ರತೆ ಮತ್ತು ಕೈಚಾಲಕು ಬೇಕು. ಇಲ್ಲವಾದರೆ ಆ ತೊಗರೀಚಟ್ಣಿ ತಯಾರಾಗುವಾಗ ಬೆರಸಿದ ಮಣ್ಣು ನಿಮ್ಮ ಮಟ್ಟಿಗೆ ಸಾಕಾಗಲಿಲ್ಲವೆಂಬ ಅರ್ಥವಾಯಿತೇ ಹೊರತು, ಮಣ್ಣಿಗೆ ಬಿದ್ದ ಚಟ್ಣಿಮುದ್ದೆಗೆ ಬದಲಾಗಿ ಇನ್ನೊಂದು ಮುದ್ದೆ ಕೊಡಬೇಕೆಂಬ ಅರ್ಥ ಬರುವದೇ ಇಲ್ಲ. ಇನ್ನು ಆ ಗಂಜಿಯ ನಿಜರೂಪವನ್ನು ಬರೇ ವರ್ಣನೆಯಿಂದ ಹ್ಯಾಗೆ ತಿಳಿಸಲಿ! ನೀವದನ್ನು ಕಂಡು ಉಂಡು ತಿಳಿಯಬೇಕೆಂದು ನನ್ನ ಅಪೇಕ್ಷೆ. ಆದರೆ ನೀವದಕ್ಕೆ ತಯಾರಿರಲಾರಿರೆಂದು ನನಗೆ ಗೊತ್ತು. ಇಷ್ಟು ಹೇಳಬಲ್ಲೆ- ಬಟ್ಟಲಿನ ಅರೆವಾಸಿಯಷ್ಟಿರುವ ಆ ನಾಮಧಾರಿ ಗಂಜಿಯೊಳಗೆ ಕೈಹಾಕುವಾಗ ಯಾರಿಗಾದರೂ 'ಅಯ್ಯೋ! ನಾನು ಬೆಸ್ತನಾಗಿ ಹುಟ್ಟಬೇಕಿತ್ತಲ್ಲ!' ಅನ್ನಿಸುತ್ತದೆ. ಯಾಕೆಕೇಳುವಿರಾ? ಅದರೊಳಗೆ ಅನ್ನದರಳುಗಳಿರುವದೆಂದರೆ ಸಮುದ್ರದಲ್ಲಿ ಮೀನುಗಳಿವೆಯಲ್ಲಾ- ಹಾಗೆ! ಹಸಿವೆಯ ಹೊತ್ತಿನಲ್ಲಿ ಆ ತಿಳಿಯೊಳಗಿನ ಅನ್ನವನ್ನು ಬೇಗನೆ ಹುಡುಕಿ ತೆಗೆಯಬೇಕಾದರೆ ಬೆಸ್ತಗಾರಿಕೆಯೇ ಬೇಕು. ಇನ್ನು ಅದರ ಬಣ್ಣದ ಮಾದರಿಯನ್ನು ಹೇಗೆ ತೋರಿಸಲಿ? ಹಳ್ಳಿಯ ನೇಗಿಲುವಾಲರಿಗಾದರೆ ಗೊತ್ತಾದೀತು- ಮುದಿಕೋಣಗಳು ಸಾಯುವ ಒಂದೆರಡು ದಿನಕ್ಕೆ ಮುಂಚೆ ನೀರುಸೆಗಣಿ ಹಾಕುವದುಂಟಲ್ಲಾ, ಅದರದ್ದೇ ರೀತಿ, ಬಣ್ಣ, ಅದೇ ವಾಸನೆ!

### ಕನ್ನಾನೂರು ಪಯಣ

ಹೇಗಿದ್ದರೂ ಕೈದಿಯಾದವನು ಅದನ್ನೊಂದು ಇತ್ಯರ್ಥ ಪಡಿಸಲೇ ಬೇಕಲ್ಲ! ಊಟವಾದ ಕೂಡಲೇ ತಟ್ಟೆ ಬಟ್ಟಲುಗಳನ್ನು ಪೂರ್ತಿ ಕೆಳಗಿಡಲು ಬಿಡದೆ ವಾರ್ಡರನು 'ರೈಸ್-ಡೌನ್' ಮಾಡಿದ; ತಡಮಾಡಿದವರನ್ನು ಮೇಲೆ ಕೆಳಗೆ ಮಾಡಿದ! ಆ ಮೇಲೆ ಎಲ್ಲರನ್ನೂ ಕೆಲಸಕ್ಕೆ ಹೊಡೆದುಕೊಂಡು ಹೋದ. ಮೊದಲಿನ ದಿನ ಬಂದ ನಾವು ಮೂವರು ಮತ್ತು ಇನ್ನೈದು ಮಂದಿ, ಹೀಗೆ ಎಂಟು ಮಂದಿ ಹಿಂದುಳಿಯಲು ಆಜ್ಞೆಯಾಯಿತು. ಸುಮಾರು ಎಂಟು ಘಂಟೆಗೆ ನಮ್ಮನ್ನು ಆಫೀಸಿಗೆ ಕೊಂಡುಹೋಗಿ, ಜೈಲು ಚಡ್ಡಿ ಬನಿಯನುಗಳನ್ನು ಕಳಚಲು ಹೇಳಿ ನಮ್ಮ ವಸ್ತ್ರಗಳನ್ನೇ ಕೊಟ್ಟರು. ಆ ಸಮಯದಲ್ಲಿ ಕೋವಿಧಾರಿಗಳಾದ ನಾಲ್ಕು ಮಂದಿ ರಿಜರ್ವ್ ಪೋಲಿಸರು ಹೊರಗೆ ಕಿಟಿಕಿಯ ಬದಿಯಲ್ಲಿ ನಿಂತಿರುವುದನ್ನು ಕಂಡೆವು. ಚೀಫ್ ವಾರ್ಡರರು ತಾನು ಬರೆದುದನ್ನು ಕಿಟಕಿಯಿಂದ ಹೊರಗೆ ಕೊಟ್ಟರು; ನಮ್ಮನ್ನು ಬಾಗಿಲಿನಿಂದ ಹೊರಗೆ ಕೊಟ್ಟರು. ನಾವು ಪುನಃ ಪೋಲಿಸರ ವಶಕ್ಕೊಪ್ಪಿಸಲ್ಪಟ್ಟೆವು. ಪೋಲಿಸರ ಕೈಯ್ಯಲ್ಲಿದ್ದ

ಕೋಳವು ನಮ್ಮ ಕೈಗೆ ಬಿತ್ತು! ಹೌದು. ವ್ಯತ್ಯಾಸವಿಷ್ಟೆ:- ಪೋಲಿಸರ ಕೈಯೊಳಗೆ ಕೋಳವಿದ್ದರೆ, ನಮ್ಮ ಕೈಯು ಕೋಳದೊಳಗಾಯಿತು. ಸಂದರ್ಭಕ್ಕನುಕೂಲವಾಗಿ ನಾವು ಎಂಟೇ ಮಂದಿಯಿದ್ದೆವು. ಗಾಡಿಯೆತ್ತುಗಳನ್ನು ಬಿಗಿಯುವಂತೆ ನಮ್ಮಲ್ಲಿ ಇಬ್ಬಿಬ್ಬರ ಕೈಗಳಿಗೊಟ್ಟಾಗಿ ಕೋಳಗಳನ್ನು ಸಿಕ್ಕಿಸಿ ಜತೆ ಮಾಡಿದರು. ಒಂದು ಜೋಡಿಗೊಬ್ಬ ಪೋಲಿಸನಂತೆ ನಾಲ್ವರು ಪೋಲಿಸರು ನಮ್ಮನ್ನು ರೈಲ್ವೆ ಸ್ಟೇಶನ್ ಕಡೆಗೆ ಹೊಡಕೊಂಡು ಹೋದರು. ನಮಗೆಹೇಗೂಹೋಗಿ ಒಮ್ಮೆ ರೈಲಿನೊಳಗೆ ಬಿದ್ದರೆ ಸಾಕೆಂಬಷ್ಟು ಸಂಕಟವಾಗುತ್ತಿತ್ತು. ಇಲ್ಲಿಂದಲ್ಲಿ ವರೆಗೂ ಜನರು ನಮ್ಮನ್ನು ಪಿಳಿಪಿಳಿ ನೋಡುತ್ತಾ, ಇಲ್ಲದ್ದನ್ನೆಲ್ಲಾ ಊಹಿಸಿಕೊಂಡು, ಜಗತ್ತಿನ ಜೀವಿಗಳಲ್ಲಿ ಅತ್ಯಂತ ಕಳತೆಯ ವರ್ಗವೆಂದು ನಮ್ಮನ್ನರಿತುಕೊಳ್ಳುವ ಆ ನಾಚುಗೆ ಯಾರಿಗೆ ಬೇಕು! ಆದರೆ ಮಾಡುವದೇನು? ಪೋಲಿಸರಿಗೆ ಜನರಿದಿರು ತಮ್ಮ ಠೀವಿಯನ್ನು ಪ್ರದರ್ಶಿಸಲು ಇದೇ ಸಂದರ್ಭ. ನಾನು ಕೇವಲ ಸಂಭಾವಿತತನ ತೋರಿಸುತ್ತಿದ್ದೇನೆಂದು ಭಾವಿಸಬೇಡಿ; ಲೋಕದಲ್ಲಿ ಒಬ್ಬರಿನ್ನೊಬ್ಬರಿಗೆ ಹೊಡೆಯುವದಿದೆ, ಬೈಯ್ಯುವದಿದೆ; ಇನ್ನೆಷ್ಟೋ ವಿಧದ ಬಲಾತ್ಕಾರವನ್ನು ನಡೆಸುವದಿದೆ. ಆದರೆ ಅವಕ್ಕೆಲ್ಲಾ ಒಂದಲ್ಲೊಂದು ವಿಧದ ಉದ್ದೇಶವೋ ಸ್ವಾರ್ಥವೋ ಉಂಟಲ್ಲ. ಇದಾವುದೂ ಇಲ್ಲದೆ ಕೇವಲ ದರ್ಪಕ್ಕಾಗಿಯೇ ಮನುಷ್ಯನು ಮನುಷ್ಯನನ್ನು ಪಶುಪ್ರಾಣಿಗಳಿಗಿಂತ ಕಡೆಯಾಗಿ ಲೋಕದಲ್ಲಿ ನೋಡುವದಿದ್ದರೆ, ಅದು ಪೋಲಿಸನು ಕೈದಿಯನ್ನು. ಹೀಗೆ ಕೊಂಡು ಹೋಗುವಾಗ ಕೈದಿಯು ಕೋಳ ಮತ್ತು ಕೋಳಪಿದ್ದ ಕೈಗಳನ್ನೆತ್ತಿ ಪೋಲಿಸನ ತಲೆಗೆ ಬಡಿದು, ಅವನ ಕೆಂಪು ಟೊಪ್ಪಿಯನ್ನು ಹಾರಿಸಿ,ಬಣ್ಣದ ಕಲೆ ಕೆಡಬಾರದೆಂದು ಅವನ ತಲೆಯನ್ನೇ ಕೆಂಪು ಮಾಡಿ ಬಿಟ್ಟ ಕತೆಗಳನ್ನು ನೀವು ಕೇಳಿರಬಹುದು. ನೀವೇನು ಬರಿಯ ಉನ್ಮಾದದಿನಿಂದ ಕೈದಿ ಹಾಗೆ ಮಾಡಿಯಾನೆಂದು ನೆನಸಿದಿರಾ? ಅಲ್ಲ, ಅವನಿಂದ ತಡೆಯಲಾಗದೆ ದೇಹದಾಸೆ ಬಿಟ್ಟು ಮಾಡುವ ಕೆಲಸವದು. ಅಂತೂ ನಮ್ಮನ್ನು ಕೊಂಡು ಹೋಗಿ ಹೇಗೂ ರೈಲಿನೊಳಗೆ ಹಾಕಿದರು ಪೋಲಿಸರು. ರೈಲು ಹೊರಟಿತು, ದೂರದ ಊರಲ್ಲಿ ದೀರ್ಘಾವಧಿಯ ತನಕ ನಮ್ಮನ್ನು ಬಿಟ್ಟು ಬರಲು ರೈಲು ಹೊರಟಿತು! ನನ್ನ ಹೃದಯವೂ ರೈಲು ಇಂಜಿನಿನಂತೆ 'ಭುಸ್ ಭುಸ್ ಭುಸ್ ಭುಸ್' ಎನ್ನುತಿತ್ತು.

### ಕನ್ನಾನೂರು ಜೈಲು

ಸರಿ ಮಧ್ಯಾಹ್ನ ಹೊತ್ತಿಗೆ ನಾವು ಕನ್ನಾನೂರಿನಲ್ಲೀದೆವು. ರೈಲ್ವೆ ಸ್ಟೇಶನಿನಿಂದ ಜೈಲಿಗೆ ನನ್ನ ಅಂದಾಜಿನಂತೆ ಮುಕ್ಕಾಲು ಮೈಲಿರಬಹುದು. ಜೈಲಿಗೆ ಸಮೀಪವಾದಂತೆ ಪೋಲಿಸರ ನಡೆ ನುಡಿಗಳ ಭಾರ ಹೆಚ್ಚಿದಂತೆ ಕಂಡು ಬಂತು. ನಾವಂತೂ ಮೌನವಾಗಿ ತಲೆಯುಡಿಗಿಟ್ಟು ಸಾಗಿದ್ದೆವು. ದೊಡ್ಡದೊಂದು ಮಹಾದ್ವಾರದ ಮುಂದೆ ಬಂದು ನಿಂತಾಗ ನನ್ನ ನರನಾಡಿಗಳಲ್ಲಿ ವಿದ್ಯುತ್ ಪ್ರವಾಹವೇ ಹರಿಯುತಿತ್ತು. ಹೊರಗಿನಿಂದ ಕೋವಿಧಾರಿ ಪೋಲಿಸನು ಆಚೆ ಈಚೆ ತಿರುಗುತಿದ್ದ. ಗೋಡೆಗಳೋ-ಎಂದೆಂದಿಗೂ ಎಲ್ಲಾ ವಿಧದಿಂದಲೂ, ಒಳಗಿನ ಮತ್ತು ಹೊರಗಿದ ಸಂಬಂಧವನ್ನು ಸಂಪೂರ್ಣವಾಗಿ ಹೂತುವೆಟ್ಟಿ ತಲೆಯೆತ್ತಿ ನಿಂತಂತೆ ಬಹಳ ಎತ್ತರಕ್ಕಿದ್ದವು. ಬೆಳಿಗ್ಗೆ ಹೊರಬಿದ್ದ ಮತ್ತು ಮಧ್ಯಾಹ್ನ ಒಳನುಗ್ಗುವ-ಈ ಎರಡು ಜೈಲು ಕಟ್ಟಡಗಳೊಳಗೆ ಅಜಗಜಾಂತರವಿದೆ, ಒಳ ಜೀವನದಲ್ಲಿಯೂ ಅಷ್ಟೇ ಅಭಂತರವಿದ್ದರೆ ಸತ್ತೆ ನಲ್ಲಾ-- ಎಂದು ಜುಮ್ಮಾಯಿತು. ಆದರೆ ಯಾವುದಾದರೂ ಏತಕ್ಕಾಗಿ ಆಗಬೇಕು? ಹೊರಗೆ ಪೋಲೀಸರು,ಒಳಗೆ ಜೈಲಿನವರು ಮಾಡಿಸಬೇಕು- ಹೊರತು ತನಗೆ ನಾನಾಗಿ ಮಾಡಿಕೊಳ್ಳುವಂತಹ ಕರ್ತವ್ಯ ಕೈದಿಯಾದವನಿಗೇನಿದೆ? ಮತ್ತೇಕೆಬರಿದೇ ಹಂಬಲಿಸಿ ಸಾಯಬೇಕಪ್ಪಾ! ನಿಜ. ಮಹಾದ್ವಾರವನ್ನು ತೆರೆದ ವಾರ್ಡರು ನಮ್ಮನ್ನು ಒಳಗೆಬರಮಾಡಿಕೊಂಡ.

'ಕನ್ನಾನೂರು'-ಇದು ನಮ್ಮ ಮನೆ ಮಾತು. ನೀವೊಂದಿಷ್ಟು ಕಣ್ಣು ತಿರುಗಿಸಿ ಮಾತಾಡಿದರೆ, ಅಥವಾ ಬಾಯಿ ಹಾರಿಸಿದರೆ 'ತಾಚಾ ಕನ್ನಾನೂರಿನವ' ಎಂಬ ಬಿರುದು ಪಡೆಯುವಿರಿ. ಆ ಹೆಸರು ಬರಬೇಕಾದರೆ ನೀವಷ್ಟಾದರೂ ವಿಶೇಷ ಮಾಡಿ ತೋರಿಸಬೇಕು. ಹೀಗಿರುವಾಗ 'ಕನ್ನಾನೂರೆಂಬುದೊಂದು ಮಹಾ ವಿಶೇಷವಯ್ಯಾ' ಎಂದು ಬೇರೆ ಹೇಳಬೇಕೆ? ಅಂತೂ ನಾನು ಕನ್ನಾನೂರಿನವನಾದೆ.

ಜೈಲಿನೊಳಗೆ ಹೊಕ್ಕ ಕೂಡಲೇ ಸಬ್ ಜೈಲಿನಲ್ಲಿ ಮಾಡಿದಂತೆಯೇ ಪ್ರಥಮತಃ ಆಫೀಸಿಗೆ ಕೊಂಡು

ಹೋಗುತ್ತಾರೆ. ಅಲ್ಲಿ ನಮ್ಮನ್ನೊಪ್ಪಿಸಿದ ಪೋಲಿಸರಿಗೆ ರಶೀದಿ ಕೊಟ್ಟು ಕಳುಹಿಸುತ್ತಾರೆ. ನಮ್ಮನ್ನು ದಾಖಲ್ಮಾಡಿಸಿಕೊಳ್ಳುತ್ತಾರೆ ನಮ್ಮ ಡ್ರೆಸ್ಸನ್ನು ತೆಗೆಯಿಸಿ ಗಂಟು ಕಟ್ಟಿ ಅದರಲ್ಲಿ ನಮ್ಮ ಹೆಸರು, ನಂಬ್ರು, ಪ್ರವೇಶಿಸಿದ ಮತ್ತು ಹೊರ ಹೋಗುವ ತಾರೀಕುಗಳನ್ನೆಲ್ಲಾ ಹಾಕಿ ಸಂಗ್ರಹಾಲಯಕ್ಕೆ ಸಾಗಿಸುತ್ತಾರೆ. ಆ ಮೇಲೆ ಅದೇ ಚಡ್ಡಿ ಬನಿಯನು, ತಟ್ಟೆ ಬಟ್ಟಲು, ಎರಡು ಕಂಬಳಿ, ಒಂದು ಹುರಿ ಹಗ್ಗದ ಚಾಪೆ-ಇಷ್ಟು ದೊರೆಯುತ್ತವೆ. ಮರೆತೆ. ಕೈದಿಯನ್ನು ದಾಖಲೆಗೆ ಸೇರಿಸಿಕೊಂಡೊಡನೆ ತೂಕ ಯಂತ್ರದಲ್ಲಿ ನಿಲ್ಲಿಸಿ ಭಾರ ನೋಡುವ ಕ್ರಮವುಂಟು. ಆ ದಿನ ತೂಕ ನಡೆದಾಗ ನನ್ನ ಭಾರವು ೧೧೨ ಪೌಂಡು ಇದ್ದಿತು. ನನಗಿಂತ ಸೋಜನ, ಸೋಜನನಿಗಿಂತ ಅಹಮ್ಮದನ ಭಾರವು ಜಾಸ್ತಿ ಇತ್ತು.

**ಕ್ವರಂಟೈನ್**

ಜೈಲನ್ನವನ್ನು ದೀರ್ಘಕಾಲ ಉಂಡವನು, ಅಲ್ಲಿ ದುಡಿದವನು ಕ್ಷಯ ರೋಗವನ್ನೋ, ಹೊಟ್ಟೆ ನೋವನ್ನೋ ಸಂಪಾದಿಸಿಕೊಂಡು ಬಂದನಾದರೆ ಅದರಲ್ಲೇನೂ ಆಶ್ಚರ್ಯವಿರಲಾರದು. ಹಾಗೆಂದ ಮಾತ್ರಕ್ಕೆ ಅದು ರೋಗಗಳನ್ನು ಸಾಕುವ ಬೀಡೆಂದು ಭಾವಿಸಿಕೊಳ್ಳಬೇಡಿ. ನೀವು ರೋಗಗಳಿಗೆ ಹೆದರುವದಾದರೂ ಸುಳ್ಳಾಗಿರಬಹುದು-ಅಲ್ಲಿಯವರು ಹೆದರುವದು ಸತ್ಯ. ಅದಕ್ಕಾಗಿಯೇ ಕನ್ನಾನೂರಿಗೆ ಬಂದವರನ್ನೆಲ್ಲಾ ಕೆಲವು ದಿನಗಳವರೆಗೆ ಇಡುವದಕ್ಕಾಗಿ ಜೈಲಿನ ಹೊರಗೆ 'ಕ್ವರೆಂಟೈನ್' ಎಂಬುದಿದೆ. ಕ್ಷಯ ಕುಷ್ಠ ಹಿಡಿದವರು, ಮೇಹ ಫರಂಗಿ ರೋಗದವರು, ಇನ್ನಿಂತಹ ಇತರ ಅಂಟು ರೋಗದವರು ಎಷ್ಟೋ ಮಂದಿ ಬರುತ್ತಾರೆ. ಕಳ್ಳಕಾಕರಾದ ಕೈದಿಗಳನ್ನಾದರೂ ಅಂಟು ರೋಗ ತಾಗಿಸಿ ಶಿಕ್ಷಿಸಲು ಜೈಲಧಿಕಾರಿಗಳು ಸಿದ್ಧರಿಲ್ಲ. ಆದ್ದರಿಂದ ಬಂದ ಬಂದ ಕೈದಿಗಳನ್ನೆಲ್ಲಾ ಕೆಲದಿನ ಕ್ವರೆಂಟೈನಿನಲ್ಲಿಡಿಸಿ ಆನಂತರ ಒಳಗೆ ಕೊಂಡು ಹೋಗುತ್ತಾರೆ. ಅಂತೆಯೇ ನಮ್ಮನ್ನೂ, ಡಿಪ್ಯುಟಿ ಜೈಲರರ ಆಫೀಸಿನಿಂದ ಕ್ವರೆಂಟೈನಿಗೆ ತಂದಿಟ್ಟರು. ಕ್ವರೆಂಟೈನೆಂದರೆ, ಜೈಲು ಪಾಗಾರದ ಹೊರಗೆ ಪ್ರತ್ಯೇಕವಾಗಿರುವ ಕಟ್ಟೋಣ. ಇಲ್ಲಿಯೂ ಒಳಗಿನಂತೆಯೇ ಸಿಪ್ಪೆಗುದ್ದುವ ಮತ್ತು ಹುರಿಹಗ್ಗ ತಯಾರಿಸುವ ಕೆಲಸ ಕೊಡುತ್ತಾರೆ. ರಾತ್ರಿ ಪ್ರತಿಯೊಬ್ಬ ಕೈದಿಯೂ ಪ್ರತ್ಯಪ್ರತ್ಯೇಕ ಕೋಣೆಯಲ್ಲಿಯೇ ಇರಬೇಕು. ಅಲ್ಲಿರುವವರೆಲ್ಲಾ ರೋಗಿಗಳಲ್ಲ; ಆದರೆ ಎಲ್ಲರೂ ಕೈದಿಗಳು! ನನ್ನನ್ನಲ್ಲಿ ಸೇರಿಸಿದ ಮರುದಿನ ಜೈಲುಡಾಕ್ಟರರು ಬಂದು ನನ್ನ ದೇಹ ಪರೀಕ್ಷೆ ಮಾಡಿದರು. ನಾನು ಯುದ್ಧ ಹಡಗದ ಕೆಲಸಗಾರನಾಗಿ ಬೇರೆಬೇರೆ ದೇಶಗಳ ನೀರುಕುಡಿದವನೆಂಬುದನ್ನು ಈ ಸಂದರ್ಭದಲ್ಲಿ ಕೂಡಾ ಮರೆಯಲಾರಿರಷ್ಟೆ! ಆ ಕಾಲದಲ್ಲಾದ ಸಿಕ್ಕಾಬಟ್ಟೆ ನೀರಿನ ಬದಲಾವಣೆಯ ಬಲದೆಂದಲೋ ಏನೋ-ನನ್ನ ಹೊಟ್ಟೆಯಲ್ಲಿ ಒಂದು ಮುಷ್ಟಿ ಗಾತ್ರದಷ್ಟು ಜ್ವರಗಡ್ಡೆ ಬೆಳೆದಿತ್ತು. ಏನಾದರೊಂದು ರೋಗವಿರುತ್ತಿದ್ದರಾಗುತ್ತಿತ್ತೆಂದು ಜೈಲಿಗೆ ಬರುವ ಹೆಚ್ಚಿನವರ ಬಯಕೆ. ಯಾಕೆ ಗೊತ್ತೆ? ರೋಗವಿದ್ದವರಿಗೆ ಕೆಲಸದಲ್ಲಿ ರಿಯಾಯತಿಯಿದೆ. ಡಾಕ್ಟರರು ಬಂದವರೇ ಮೊದಲು ನನ್ನ ಎದೆಯನ್ನು ಪರೀಕ್ಷಿಸಿದರು. ನನ್ನ ಹೃದಯುವು ಸ್ವಚ್ಛವಾಗಿಯೆ ಇದೆ. ಆದರೆ ಡಾಕ್ಟರರಿಗಷ್ಟು ಪರೀಕ್ಷಾಬುದ್ಧಿ ಎಲ್ಲಿಂದ? ಅವರು ನನ್ನ ಹೊಟ್ಟೆಯಲ್ಲಿ ಜ್ವರಗಡ್ಡೆಯಿರುವುದನ್ನು ಮಾತ್ರ ಕಂಡುಹಿಡಿದು ನನಗೆ ಅರ್ಧ ಕೆಲಸ ಕೊಡತಕ್ಕುದೆಂದು ಶಿಫಾರಸು ಮಾಡಿದರು.



**ಜೈಲಿನ ವಿವರ, ಕೆಲಸ, ಕೈದಿಗಳ ಮತ್ತು ಅಧಿಕಾರಿಗಳ ರೀತಿ ನೀತಿ, ಜೈಲಾರೈಕೆ, ಆಹಾರ, ಶಿಸ್ತು ಮೊದಲಾದವುಗಳ ವಿವರ ಬರುವ ವಾರದ ಸಂಚಿಕೆಯಲ್ಲಿ.**



# ನಿಮಗೆ ಬೇಸರವಾದಾಗ ನನಗೆ ಬರೆಯಿರಿ.

- ಪ್ರತಿವಾರವೂ ಕರ್ನಾಟಕದ ವಿವಿಧ ಭಾಗಗಳಿಂದ ಅಧಿಕ ಸಂಖ್ಯೆಯಲ್ಲಿ ಪ್ರಶ್ನೆಗಳು ಬರುತ್ತಿರುವುದರಿಂದ ಸ್ಥಳ ಸಂಕೋಚದ ದೆಸೆಯಿಂದ ಎಲ್ಲರ ಪ್ರಶ್ನೆಗಳು ಒಮ್ಮೆಯೇ ಉತ್ತರಿಸಲ್ಪಡಲಾಗುವುದಿಲ್ಲ.
- ಯೋಗ್ಯವಾದ ಪ್ರಶ್ನೆಗಳಿಗೆ ಯೋಗ್ಯವಾದ ಉತ್ತರಗಳು ಕೊಡಲ್ಪಡುವವು. ಕೇವಲ ತಮಾಷೆಗಾಗಿ ಕೇಳಲ್ಪಡುವಂಥವುಗಳಿಗೆ ತಮಾಷೆಯ ಉತ್ತರ ಕೊಡಲಾಗುವುದು.
- ಬಹಳ ಅಶ್ಲೀಲವಾದ ಪ್ರಶ್ನೆಗಳಿಗೆ ಈ ವಿಭಾಗದಲ್ಲಿ ಎಡೆಯಿಲ್ಲ.
- ಇತರ ಪತ್ರಿಕೆಗಳನ್ನು ಅಥವಾ ವ್ಯಕ್ತಿಗಳನ್ನು ಬೈದು ಕೇಳುವ ಪ್ರಶ್ನೆಗಳಿಗೆ ಉತ್ತರವು ಸಿಗಲಾರದು.
- ಪ್ರಶ್ನೆಗಳು ಸಾಧ್ಯವಾದಷ್ಟು ಮಟ್ಟಿಗೆ ಸಾರ್ವಜನಿಕ ಅಭಿರುಚಿಯುಳ್ಳದಾಗಿರಬೇಕು.

**ಶ್ರೀ. ಯನ್. ಜಿ. ರಂಗನಾಥ.**
**ಕೆಳದಿ, ಶಿವಮೊಗ್ಗ.**

"ನಿಮಗೆ ಬೇಸರವಾದಾಗ ನನಗೆ ಬರೆಯಿರಿ ಎಂಬ ತಮ್ಮ ಪತ್ರಿಕೆಯು—ಆಕಾಶ್ಪಿನವನ್ನು ನೋಡಿದೆ ಪ್ರಜಾಮತದ ಪ್ರಚಾರಕ್ಕೆ (ಕೆಲವರ ಅಭಿಪ್ರಾಯದಂತೆ) ಸಹಾಯಕವಾದ "ಪಾಪಪೂರಿತ ಪಟ್ಟಣಗಳು." ಎಂಬ ಲೇಖನದ ರೀತಿಗಳನ್ನು ಕೆಲ ಪತ್ರಿಕೆಗಳು (ತಮ್ಮ ಅಂತರಂಗವು ಸಹ) ಅನುಸರಿಸುತ್ತಿರುವುದನ್ನು ಕಂಡು ಕಂಡು ಕನ್ನಡದ ಪತ್ರಿಕೆಯ ಅಭಿಮಾನಿಯಾದ ನನಗೇಕೋ ಬೇಸರ ಬಂದಿತು.

ಪೂರ್ವಾಚಾರಗಳನ್ನೋ, ದುಡ್ಡೆಳೆಯುವ ಪುರೋಹಿತರ ರೀತಿಗಳನ್ನೊ, ಗೌರವದ ಆಧ್ಯತೆಯಿಂದ ಹಳಿಯುವ—ಜನಪದ ಸುಧಾರಣೆಯ ಜವಾಬ್ದಾರಿಯನ್ನು ಹೊತ್ತ ಉಚ್ಚಸಂಸ್ಕೃತಿಯ ಪತ್ರಿಕಾಕರ್ತರುಗಳೂ ಈ ಅನುಸರಣೆಯ ಸೆಳೆತಗಳಲ್ಲಿ ತೇಲಿ ಹೋಗುತ್ತಿರುವುದೇಕೆ? ಉಚ್ಚ ಶಿಕ್ಷಣ, ಭಾಷಾಭಿಮಾನ, ಜನಮಾನ ಸಂಸ್ಕರಣದ ಅವಕಾಶ ಇಂಥವುಗಳನ್ನೆಲ್ಲ ಈ ಬಗೆಯ ಲೇಖನಗಳಿಗೆ ಮೀಸಲಾಗಿರಿಸುವುದರ ಗೂಢವೇನು? 'ಲೋಕ ಪರಿಚಯ' ಎಂಬಿವೇ ಮೊದಲಾದ ಮೇಲಾ ಬಣ್ಣಗಳೇನೇ ಇದ್ದರೂ ಭಾವನಾವಶರ ಹಣ ಸೆಳೆಯುವ ಕಿಗ್ಗೆಲಸವು ಇದಾಗಿರಲಿಕ್ಕಿಲ್ಲವೇ? ಈ ಪ್ರಶ್ನೆಗಳಿಗೆ ತಮ್ಮ ಅಂತರಂಗವು ಸಮಾಧಾನಕರವಾದ ಸರಳವಾದ ಉತ್ತರವನ್ನು ದಯಪಾಲಿಸಬೇಕೆಂದು ಹಾರೈಸುತ್ತೇನೆ."

ತಮ್ಮ ಪ್ರಶ್ನೆಯು ಬಹಳ ಯೋಗ್ಯವಾದುದೆಂದು ಒಪ್ಪಿಕೊಳ್ಳಲೇ ಬೇಕಾಗಿದೆ. ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಇತ್ತೀಚೆಗೆ ಅದೊಂದು ತರದ ಹೊಸ ಹುರುಪು ಹುಟ್ಟಿದೆ. ಆದರೆ ಈ ಹುರುಪು ತಪ್ಪು ದಾರಿಯಲ್ಲಿ ಮುನ್ನಡೆಯುತ್ತಿದೆಯೆಂದು ಹೇಳಲಿಕ್ಕೆ ಎಡೆಸಿಗುವಂತಹ ಕೆಲವು ವಿಚಾರಗಳು ಕಾಣಿಸಿಕೊಳ್ಳುತ್ತಿರುವುದು ದುರದೃಷ್ಟವೆನ್ನಬೇಕು. ಜನಮನೋರಂಜನೆಗಾಗಿ ಕೆಲವು ಪತ್ರಿಕೆಗಳು ಮಾದಕ ಪದಾರ್ಥಗಳಂತಹ ಲೇಖನಗಳನ್ನೋ ಚಿತ್ರಗಳನ್ನೋ ಪ್ರಕಟಿಸತೊಡಗಿ ಸಾಮಾನ್ಯ ಜನತೆಯ ಅಭಿರುಚಿಯನ್ನು ಕೆಡಿಸಿಬಿಟ್ಟವೆಯೆಂದು ನಿಸ್ಸಂಕೋಚವಾಗಿ ಹೇಳಬಹುದಾಗಿದೆ. ಆ ಕುರಿತು ಸ್ವಲ್ಪ ಆಳವಾಗಿ ಯೋಚಿಸಿದರೆ ಉಚ್ಚ ಸಂಸ್ಕೃತಿಯುಳ್ಳ ಪತ್ರಿಕೋದ್ಯಮಿಗಳು ಇಷ್ಟೊಂದು ಕೀಳ್ಗೆಲಸಕ್ಕೆ ಅದೇಕೆ ಕೈಹಾಕಿದರೆಂದು ಸ್ಪಷ್ಟವಾಗುತ್ತದೆ. ನಮ್ಮ ಕರ್ನಾಟಕದಲ್ಲಿ ಪತ್ರಿಕೆಗಳನ್ನೋದುವವರ ಸಂಖ್ಯೆಯು ಇತ್ತೀಚೆಗೆ ಹೆಚ್ಚಲಾರಂಭಿಸಿತೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಸ್ವಲ್ಪ ಕಾಲದ ಮೊದಲು ಕ್ಲಪ್ತಕಾಲಕ್ಕೆ ಪತ್ರಿಕೆಗಳನ್ನು ಕರ್ನಾಟಕದ ಮೂಲೆ ಮೂಲೆಗೊಯ್ಯುವ ಸೌಕರ್ಯವು ಇಲ್ಲದಿದ್ದುದರಿಂದ ಪ್ರತಿಯೊಂದು ಪತ್ರಿಕೆಯೂ ತನ್ನ ಕ್ಷೇತ್ರದ ಸುತ್ತುಮುತ್ತಲು ಸಾಧ್ಯವಾದಷ್ಟು ವಾಚಕರನ್ನು ಗಳಿಸಿಕೊಳ್ಳಬೇಕಾಗಿತ್ತು. ಪತ್ರಿಕೆಯ ಪ್ರಚಾರವನ್ನು ಹೆಚ್ಚಿಸುವುದಕ್ಕಾಗಿ ಸಾಧ್ಯವಿರುವ ಎಲ್ಲಾ ಸ್ವಾರಸ್ಯದ ವಿಷಯಗಳನ್ನು ತುಂಬುವ ಅಭ್ಯಾಸವು ತಲೆದೋರಿತು. ಜನಮನವನ್ನಾಕರ್ಷಿಸುವುದರಲ್ಲಿ ಪತ್ರಿಕೆಗ

ಯೊಳಗೆ ಸ್ಪರ್ಧೆ ನಡೆಯಲಾರಂಭಿಸಿತು. ಜನತೆಯಲ್ಲಿ ವಾಚನಾಭಿರುಚಿಯನ್ನು ಹೇಗಾದರೂ ಹುಟ್ಟಿಸಿ, ಆ ಬಳಿಕ ಕಲಾಪೂರ್ಣವಾದ ಸುವಿಚಾರಗಳನ್ನು ಪ್ರಕಟಿಸಬಹುದೆಂದು ಅವರು ಭಾವಿಸಿರಬೇಕು. ವಿಚಿತ್ರವೆನಿಸಿದರೂ ಈ ಉಪಾಯವು ಸಾಮಾನ್ಯ ಮಟ್ಟಿಗೆ ಯಶಸ್ವಿಯಾಗಿದೆ. ಒಂದು ಪತ್ರಿಕೆಯು ಎಂತಹ ಉಚ್ಚ ಸಾಹಿತ್ಯಪೂರ್ಣ ಲೇಖನಗಳಿಂದ ಕೂಡಿರಲಿ, ಎಂತಹ ಗಹನ ವಿಚಾರಗಳನ್ನು ಪ್ರಕಟಿಸಿರಲಿ, ಅದು ಕನ್ನಡ ಜನತೆಯ ಕೈಸೇರದಿದ್ದರೆ ಪ್ರಯೋಜನವೇನು? ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟ ಪ್ರತಿಗಳು ನಾಡಿನ ಮೂಲೆ ಮೂಲೆಗಳಿಗೆ ಹೋಗದೆ ತನ್ನ ಜನ್ಮಸ್ಥಾನದಲ್ಲಿಯೇ ಕೊಳೆಯುವಂತಾದರೆ ಅದರಿಂದಾಗುವ ಪ್ರಯೋಜನವೇನು? ಇವೆಲ್ಲವನ್ನು ಕಂಡು ವ್ಯವಹಾರ ಚತುರರಾದ ಕೆಲವು ಪತ್ರಿಕೋದ್ಯಮಿಗಳು ಮೊತ್ತಮೊದಲು ಹೇಗಾದರೂ ಜನರಲ್ಲಿ ವಾಚನಾಭಿರುಚಿಯನ್ನುಂಟುಮಾಡುವ ಸಾಹಸಕ್ಕೆ ಕೈಗೊಟ್ಟಿರಬೇಕು. ಹಾಲಿಗೆ ಅಫೀಮನ್ನು ಅಲ್ಪ ಪ್ರಮಾಣದಲ್ಲಿ ಸೇರಿಸುವ ಕೆಲಸವನ್ನು ಮಾಡಿರಬೇಕು. ಒಂದು ವೇಳೆ ನೀವಿವನ್ನು ಒಪ್ಪದಿರುವುದಿದ್ದರೆ ಎಲ್ಲಾ ದೃಷ್ಟಿಗಳಿಂದಲೂ ಉತ್ತಮವಾಗಿದ್ದ ಅನೇಕ ಪತ್ರಿಕೆಗಳು ಮೂಲೆ ಪಾಲಾಗಲು ಕಾರಣವೇನು? ಸಾಂಸ್ಕೃತಿಕ ಹಾಗು ವಿದ್ವತ್ಪೂರ್ಣ ಲೇಖನಗಳನ್ನೊಳಗೊಂಡ ಅನೇಕ ಪತ್ರಿಕೆಗಳು ಈಗಲೂ ಆರ್ಥಿಕ ದುರವಸ್ಥೆಯಿಂದಾಗಿ ನರಳುತ್ತಾ ಪ್ರಗತಿ ಪಥದಲ್ಲಿ ಕುಂಟ ನಡೆಯುತ್ತಿರುವುದೇಕೆ? ಎಡವಿ ಬೀಳುವುದೇಕೆ? ಜನತೆಯನ್ನು ಉಚ್ಚಸಾಹಿತ್ಯದ ಪ್ರಭಾವವು ಅದೇಕೆ ಮರುಳು ಮಾಡಲಿಲ್ಲ? ಕರ್ನಾಟಕ ಸಾಹಿತ್ಯ ಪರಿಷತ್ತಿನ ಗಂಧ ಗಾಳಿಯು ಇನ್ನೂ ಜನತೆಯ ಬಳಿಸೇರದಿರುವ ಕಾರಣವೇನು? ಜನತೆಯಲ್ಲಿ ವಾಚನಾಭಿರುಚಿ ಹುಟ್ಟಿದ ನಂತರವಲ್ಲವೆ ಸಾಹಿತ್ಯಾಭಿರುಚಿ? ಇನ್ನೂ ಶಿಕ್ಷಣದ ಬೆಳಕು ಹರಿಯದಿರುವ ಕರ್ನಾಟಕದ ಆದೆಷ್ಟೋ ಸಂದುಗೊಂದುಗಳಲ್ಲಿರುವ ಜನರಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸುವುದು ಅತ್ಯಾವಶ್ಯವಾಗಿದೆ. ಜನತೆಯಲ್ಲಿ ಬೇರೂರಿರುವ ಮೂಢ ಭಾವನೆಗಳು ಇನ್ನೂ ಮಾಯವಾಗಲಿಲ್ಲ. ಇದಕ್ಕೆ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಕ್ಷಣ, ನಿಮಿಷ, ತಾಸು, ದಿನ, ವಾರ ಮತ್ತು ವರ್ಷ ಭವಿಷ್ಯಗಳೇ ಜೀವಂತ ಸಾಕ್ಷಿಗಳಾಗಿವೆ. ಕನ್ನಡ ಪತ್ರಿಕೆಗಳನ್ನು ಹಣ ಕೊಟ್ಟು ಕೊಂಡುಕೊಳ್ಳುವವರು ಸಾಹಿತಿಗಳಲ್ಲ. ಸಾಮಾನ್ಯ ಮನುಷ್ಯನು ತನ್ನ ದುಡಿಮೆಯ ಒಂದಂಶವನ್ನು ವಾರಕ್ಕೊಂವೆರಡು ಬಾರಿ ಈ ಪತ್ರಿಕೆಗಳಿಗಾಗಿ ವ್ಯಯಿಸುತ್ತಾನೆ. ಅವನಿಗೆ ಮೊದಲು ಬೇಕಾದುದು ವಿಚಿತ್ರ ವಿಚಾರಗಳು, ಮನಸ್ಸಿಗೆ ರಂಜನೆಯನ್ನುಂಟುಮಾಡುವಂಥ ಕಥೆಗಳೇ ಮೊದಲಾದವುಗಳು. ಕೇವಲ ಜನ ಬೆಂಬಲದ ಮೇಲೆ ಹೊಂದಿಕೊಂಡಿರುವ ಕನ್ನಡ ಪತ್ರಿಕೆಗಳು ಅಂಥವನಿಗೆ ಗಹನವಾದ ಸಾಹಿತ್ಯದ ಭಕ್ಷ್ಯಗಳನ್ನು ಬಡಿಸಿದರೆ ಮೆಚ್ಚುವುದೆ? ಇಲ್ಲ. ಪತ್ರಿಕೆಗಳು ಜನತೆಯ ಮನೋನಾಡಿಯ ಬಡಿತವು ಹೇಗಿದೆಯೆಂಬುದನ್ನು ತಿಳಿಯದೆ ತಮಗೆ ಬೇಕಾದುದನ್ನು ಪ್ರಕಟಿಸುತ್ತಾ ಹೋದರೆ ಪತ್ರಿಕೆಗೆ ಸಿಗುವ ಆರ್ಥಿಕ ಬೆಂಬಲವು ಕಡಿಮೆಯಾಗಿ ಈಗಾಗಲೆ ಅಳಿದು ಹೋಗಿರುವ ಪತ್ರಿಕೆಗಳ ಸಾಲಿಗೆ, ಮೌನವಾಗಿ, ಯಾವನೊಬ್ಬನ ಸಹಾನುಭೂತಿಯೂ ಇಲ್ಲದೆ ಸೇರಬೇಕಾಗುತ್ತದೆ. ಬಹಳ ಪ್ರಯಾಸದಿಂದ ಪತ್ರಿಕೆಗಳನ್ನು ನಡೆಸುವ ಪತ್ರಿಕಾ ಕರ್ತರು ಬೇಕೆಂದೇ ಆತ್ಮಹತ್ಯೆಯನ್ನು ಮಾಡಿಕೊಳ್ಳುವರೆ? ಅದಕ್ಕೆ ಬದಲಾಗಿ ಹೇಯವೆಂಬುದನ್ನು ಪರಿಪೂರ್ಣವಾಗಿ ತಿಳಿದಿದ್ದರೂ, ಮೆಲ್ಲನೆ ಜನರನ್ನು ಆಕರ್ಷಿಸಿ ಆ ಬಳಿಕ ಅವರ ಮನೋಭಿರುಚಿಯನ್ನು ತಿದ್ದಬಹುದೆಂದು ಪತ್ರಿಕೋದ್ಯಮಿಗಳು ಯತ್ನಿಸುತ್ತಿರಬಹುದು.

ಅಂತರಂಗದ ಕುರಿತು ಹೇಳುವುದಿದ್ದರೆ ಅದು ಅನುಕರಣೆಯ ಸೆಳೆತಕ್ಕೆ ಸಿಗಲಿಲ್ಲ. ಆದರೆ ಪತ್ರಿಕಾ ಪ್ರಸಾರ ವಾತಾವರಣದ ಪರಿಸ್ಥಿತಿಯನ್ನು ಕಂಡು, ಜನತೆಗೆ ನಿಜವಾಗಿಯೂ ಜಗತ್ತಿನ ಪಾಪಕರ್ಮಗಳನ್ನು ತಿಳಿಯುವ ಆಶೆಯಿದೆಯೇ ಎಂಬುದನ್ನು ಪರೀಕ್ಷಿಸತೊಡಗಿದೆ. ಜನತೆಯು ಅಂಥವುಗಳನ್ನು ಮೆಚ್ಚುತ್ತಿದೆಯೆಂದು ಪ್ರತಿವಾರ ವಿಕ್ರಯಿಸಲ್ಪಡುವ ಪತ್ರಿಕೆಗಳ ಸಂಖ್ಯೆಯೇ ಹೇಳುತ್ತಿದೆ. ಜನತೆಗಿದು ಬೇಡವೆಂದು ನಮಗೆ ಕಂಡರೆ ನಿಮ್ಮಂಥ ವಾಚಕರು 'ರಂಜಕ' ಲೇಖನಗಳು ಬೇಡವೆಂದು ನಮಗೆ ಅಧಿಕ ಸಂಖ್ಯೆಯಲ್ಲಿ ಹೇಳಿದರೆ, ನಿಶ್ಚಯವಾಗಿಯೂ ನಾವು 'ಪ್ಯಾರಿಸಿನ ಪಾಪಕೂಪ'ಗಳಂತಹ ಲೇಖನಗಳು "ಅಂತರಂಗ"ದ ಬಳಿ ಸಾರದಂತೆ ಹೊಡೆದೋಡಿಸಿ, ಸಾಹಿತ್ಯ ದೃಷ್ಟಿಯಲ್ಲಿ ಯೋಗ್ಯವೆನಿಸುವ ಕಲಾಪೂರ್ಣ ಲೇಖನಗಳಿಂದ ತುಂ

ಬಿಸಿ ಈಗಿನಂತೆಯೇ ನಮ್ಮ ವಾಚಕರ ಪ್ರಶಂಸೆಗೆ ಪಾತ್ರರಾಗುವೆವೆಂದು ಭರವಸೆ ಕೊಡುತ್ತೇವೆ.

೦೦೦

ಶ್ರೀ. ಬಿ. ಆರ್. ನಟರಾಜೇ ಅರಸ್
ಬಿಡದಿ. (ಬೆಂಗಳೂರು ಜಿಲ್ಲೆ)

"ಇಸ್‌ಫೀಟ್, ಮುಂತಾದ ಜೂಜುಗಳಿಂದ, ಇತರರಿಗೆ ನಷ್ಟವಾಗುವ ಕಾರಣ ಅದು ಕಾನೂನಿಗೆ ವಿರೋಧವೆಂದು ಸರ್ಕಾರದವರು ಶಿಕ್ಷೆಯನ್ನು ವಿಧಿಸುತ್ತಾರೆ. ಇದಕ್ಕಿಂತಲೂ ಅಧಿಕವಾಗಿ ನಷ್ಟವಾಗುತ್ತಿರುವ ಕುದುರೆ ಜೂಜ (ರೇಸ್)ನ್ನು ಸರ್ಕಾರದವರು ಏತಕ್ಕೆ ತಡೆಗಟ್ಟುತ್ತಿಲ್ಲ ಎಂಬುದನ್ನು ದಯವಿಟ್ಟು ತಿಳಿಸಿ."

"ಮದ್ಯವನ್ನು ಬಡವನು ಸೇವಿಸಿದರೆ ಅದು ಅಮಲಿಗಾಗಿ, ಧನಿಕನು ಸೇವಿಸಿದರೆ ಅದು ಔಷಧಿಗಾಗಿ" ಎಂಬೊಂದು ಜಾಣ್ನುಡಿಯಿದೆ ಆಳರಸರು ಮಾಡುವುದೆಲ್ಲಾ ಚೆನ್ನೆಂದು ಭಾವಿಸುವ ಕಾಲವೆಂದೋ ಕಳೆದು ಹೋಗಿದೆಯೆಂಬುದಕ್ಕೆ ನಿಮ್ಮ ಪ್ರಶ್ನೆಯೇ ಸಾಕ್ಷಿ ಈ ಕುದುರೆ ಜೂಜನ್ನು ಮುಂಬಯಿ, ಮತ್ತು ಇನ್ನಿತರ ಕಡೆಗಳಿಂದ ತೆಗೆದು ಹಾಕುವರೆ ಈಗಾಗಲೇ ಸಾಮಾನ್ಯ ಮಟ್ಟಿನ ಚಳವಳವು ಪ್ರಾರಂಭವಾಗಿದೆ. ಈ ಜೂಜಿನಲ್ಲಿ ಹೆಚ್ಚಾಗಿ ವಿದೇಶಿಯರು ಭಾಗವಹಿಸುವುದರಿಂದ ಅವುಗಳು ಇನ್ನೂ ನಡೆಯುತ್ತಿರಲು ಕಾರಣವಾಗಿದೆ. ಇಂತಹ ಸಾರ್ವಜನಿಕ ಜೂಜುಗಳನ್ನು ಎಲ್ಲೆಡೆಗಳಲ್ಲಿಯೂ ನಿಲ್ಲಿಸುವುದು ಅತ್ಯಾವಶ್ಯವಾಗಿದೆ. ಇವುಗಳನ್ನು ಪ್ರಾರಂಭಿಸಿದ ಯುರೋಪಿಯನರನ್ನು ಮೆಚ್ಚಿಸುವುದಕ್ಕಾಗಿ, ಅಥವಾ ಅವರಿಗೆ ವಿರೋಧವಾಗಿ ನಡೆಯದಿರುವುದಕ್ಕಾಗಿ ಮಾತ್ರ ವಿವಿಧ ಸರಕಾರಗಳು ಕುದುರೆ ಜೂಜಿಗೆ ತಡೆಗಟ್ಟದಿರುವ ಕಾರಣವಾಗಿದೆ.

೦೦೦

"ಪುರುಷರಲ್ಲೂ, ಸ್ತ್ರೀಯರಲ್ಲಿಯೂ ಏಕ ರೀತಿಯಿಂದ ಕಾಮವಿರುವಾಗ್ಯೂ, ಪುರುಷನು ಅನ್ಯಸ್ತ್ರೀಯಲ್ಲಿ ಭೋಗಪಟ್ಟಾಗ್ಯೂ ಆತನು ಪತಿತನಾಗಲಾರನೆಂದು, ಸ್ತ್ರೀಯಳು ಮಾತ್ರ ಅನ್ಯಪುರುಷನಲ್ಲಿ ಭೋಗಪಟ್ಟರೆ ಅವಳು ಪತಿತೆಯೆಂದು ಆಕೆಯನ್ನು ಸಮಾಜವು ಹೊರಗೆ ಹಾಕುವುದು. ಹೀಗೆ ಸಮಾಜವು ಸ್ತ್ರೀಯನ್ನು ಮಾತ್ರ ತಿರಸ್ಕರಿಸಿ, ಅನ್ಯಸ್ತ್ರೀ ಭೋಗಿಯಿಂದ ಪುರುಷನನ್ನು ತಿರಸ್ಕರಿಸದೆ. ಪುರಸ್ಕರಿಲು ಕಾರಣವೇನು, ದಯವಿಟ್ಟು ತಿಳಿಸಿ."

ಸಮಾಜದ ಹೆಚ್ಚಿನ ಕಾಯಿದೆಗಳು ಪುರುಷರಿಂದಲೇ ಮಾಡಲ್ಪಟ್ಟವುಗಳೆಂದು ಇದೊಂದು ನಿದರ್ಶನದಿಂದಲೇ ಸ್ಪಷ್ಟವಾಗುತ್ತದೆ ಅನೇಕ ಧರ್ಮಶಾಸ್ತ್ರಗಳಲ್ಲಿ ಸ್ತ್ರೀಯರಿಗೆ ಪುರುಷರೊಡನೆ ಸರಿಸಮಾನವಾದ ಸ್ಥಾನವು ಕೊಡಲ್ಪಡದಿರುವ ಮೂಲ ಕಾರಣವೆಂದರೆ ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯವು ಇಲ್ಲದಿದ್ದುದರಿಂದಾಗಿ. ಸ್ತ್ರೀಯರು ಕೇವಲ ಭೋಗಸಾಧನಗಳು ತಮ್ಮ ಗಂಡಂದಿರ ಸೇವೆಯನ್ನು ಅತ್ಯಂತ ದೈನ್ಯಭಾವದಿಂದ ಮಾಡುವ ಮೊದ್ದು ಜಂತುಗಳೆಂಬ ಭಾವನೆಯು ಸಮಾಜದಲ್ಲಿ ಶತಮಾನ ಶತಮಾನಗಳಿಂದ ಬೇರೂರಿಕೊಂಡು ಬಂದಿದೆ. ನವನಾಗರಿಕತೆಯ ಈ ಕಾಲದಲ್ಲಿ ಕೂಡಾ ಸ್ತ್ರೀ-ಪುರುಷರೊಳಗಿನ ಸ್ಥಾನಮಾನಗಳಲ್ಲಿ ಯಾವ ಬದಲಾವಣೆಯೂ ಆಗದಿರುವುದು ಶೋಚನೀಯ. ಸ್ತ್ರೀಯರು ಪುರುಷರಂತೆಯೇ ದುಡಿದು ಆರ್ಥಿಕ ಸ್ವಾತಂತ್ರ್ಯವನ್ನು ಪಡೆದರೆ ತನ್ನಷ್ಟಕ್ಕೇ ಈ ಶುಷ್ಕ ಪದ್ಧತಿಯು ಮೂಲೆ ಪಾಲಾಗುತ್ತದೆ. ಪುರುಷನ ಸ್ವಾರ್ಥದಿಂದಾಗಿ ಪರ್ದಾ ಪದ್ಧತಿಯು ತಲೆದೋರಿತು. ತನ್ನ ಮಮತೆಯ ಲಲನೆಯನ್ನು ಬೇರಾವನೂ ನೋಡಬಾರದೆಂಬ ಗಂಡನ ಅತಿರೇಕ ಆಶೆಯಿಂದ 'ಗೋಷಾ' ಅಥವಾ 'ಪರ್ದಾ' ಎಂಬ ಲಜ್ಜಾವಹ ಪದ್ಧತಿಯು ಕ್ರಮೇಣ ಜಾರಿಗೆ ಬಂದು ಸಮಾಜದ ಅರ್ಧಾಂಶವು ಪರ್ದೆಯ ಕತ್ತಲೆಯಲ್ಲಿದೆ. ಜ್ಞಾನದ ಬೆಳಕು ಇನ್ನೂ ಆ ಕಡೆ ಹರಿಯಲಿಲ್ಲ. ಈ ಕುರುಡು ಪದ್ಧತಿಯನ್ನು ಧರ್ಮದೊಡನೆ ಸೇರಿಕೊಂಡ ಅಂಧಶ್ರದ್ಧೆಗಳು ಸಮರ್ಥಿಸುತ್ತಿವೆ. ಉದಾಹರಣೆಗಾಗಿ ಮುಸಲ್ಮಾನರ ಪರ್ದೆಯನ್ನು ನೋಡಿರಿ. ಕಾಲದೋಷವಾಗಿರುವ ಆ ಅಸಂಬದ್ಧವಾದ ಕುರುಡು ಪದ್ಧತಿಯನ್ನು ಇನ್ನೂ ಅವರು ಅಪ್ಪಿ ಹಿಡಿದಿದ್ದಾರೆ. ಜನನಿಯ ಮಗ್ಗುಲಲ್ಲಿ ಜ್ಞಾನದ ಬೆಳಕನ್ನು ಕಾಣಬೇಕಾಗಿದ್ದ ಭಾವೀ ಜನಾಂಗವು ಅವಿದ್ಯೆಯ ಕತ್ತಲಲ್ಲಿ ನರಳುತ್ತಿದೆ. ಅದು ಕಾರಣವೇ ಹೆಚ್ಚಿನ ಮುಸಲ್ಮಾನರು ನಿರಕ್ಷರ ಕುಕ್ಷಿಗಳಾಗಿರುವುದು.

ನಿಮ್ಮ ಪ್ರಶ್ನೆಯಲ್ಲಿ ಹೇಳಲ್ಪಟ್ಟಿರುವುದನ್ನು ಯಾರೂ ಸಮರ್ಥಿಸದಿದ್ದರೂ, ನ್ಯಾಯವಾಗಿ ನೋಡುವುದಿದ್ದರೆ ಪುರುಷನು ತನಗೆ ಪ್ರಿಯವೆನಿಸುವ ಸ್ತ್ರೀಯೊಡನೆ ಸಂಭೋಗ ಸುಖವನ್ನು ಪಡೆಯುವಾಗ ಅದೇ ಸವಲತ್ತು ಅವನ ಜೀವನದ ಒಡನಾಡಿಯಾಗಿರುವ ಪತ್ನಿಗೂ ದೊರಕಬೇಡವೆ? ಸ್ತ್ರೀಯನ್ನು ಪತಿತಳೆಂದು ಕರೆದು, ಪುರುಷನು ಅನ್ಯಾಯ ಮಾಡಿದರೂ ಅವನು ಮಾಡಿರು

ವುದು ಸರಿಯೆಂದು ಹೇಳಲು ಸಮಾಜಕ್ಕೆ ಯಾವ ಅಧಿಕಾರವಿದೆ? ಮೊದಲೇ ಹೇಳಿದಂತೆ ಈ ಅನ್ಯಾಯಕ್ಕೆ ಮೂಲ ಕಾರಣವೆಂದರೆ ಸ್ತ್ರೀಗೆ ಆರ್ಥಿಕ ಸ್ವಾತಂತ್ರ್ಯವಿಲ್ಲದಿರುವುದು. ಟರ್ಕಿ, ರಷ್ಯಗಳಲ್ಲಿರುವಂತೆ ನಮ್ಮ ನಾಡಿನಲ್ಲಿಯೂ ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯವು ಸಿಕ್ಕಿದರೆ ನಿಮಗೆ ಇಂತಹ ಪ್ರಶ್ನೆಯನ್ನು ಕೇಳಲಿಕ್ಕೇ ಎಡೆಸಿಗಲಿಕ್ಕಿಲ್ಲ.

೦ ೦ ೦

ಶ್ರೀ. ಎ. ಮಂಜುನಾಥ
ಶಾಲಿವಾಹನ, ಕಾರ್ಯದರ್ಶಿ,
ಆರ್ಯ ವಿದ್ಯಾ ವಿಜಯ
ನಾಟಕ ಸಭಾ, ಅತ್ತಾವರ,
ಮಂಗಳೂರು.

"ಮಂಗಳೂರಿನ ಉತ್ಸಾಹಿ ವಿದ್ಯಾವಂತ (?) ತರುಣರಿಂದ ನಡೆಸಲ್ಪಡುವ ಮಂಗಳೂರು ಎಮೆಚೂರ್ಸ್ ಸಂಗೀತ ನಾಟಕ ಸಭೆಯ ಆಶ್ರಯದಲ್ಲಿ ಮೊನ್ನೆ ತಾ. ೨೧೧-೩೮ರಲ್ಲಿ ಕಾಲಚಕ್ರವೆಂಬ ನೂತನ ಸಾಮಾಜಿಕ ನಾಟಕವು ಅಭಿನಯಿಸಲ್ಪಟ್ಟಿತು. ಕಥೆ, ಪಾತ್ರಗಳು, ಸನ್ನಿವೇಶಗಳು ಎಲ್ಲವೂ ಹಿಂದೂ ಸಮಾಜದ ಆಚಾರ ವಿಚಾರಗಳಿಗೆ ವಿರುದ್ಧವಾಗಿ ಕಲ್ಪಿಸಲ್ಪಟ್ಟಿದೆ ಯಾದ್ದರಿಂದ ಇಂತಹ ನಾಟಕಗಳನ್ನು ಸಮಾಜದ ಮುಂದೆ ಅಭಿನಯಿಸಿ ತೋರಿಸುವ ಈ ಉತ್ಸಾಹಿ ವಿದ್ಯಾವಂತ (?) ತರುಣರ ಅಭಿಪ್ರಾಯವೇನು?"

ರಂಗಭೂಮಿಯಲ್ಲಿ 'ಮಾದರ್ ಚೋದ್' ಎಂಬ ಅಸಹ್ಯ, ಅವಾಚ್ಯ, ಅಸಭ್ಯ ಶಬ್ದವನ್ನು ಯಾವುದೇ ರೀತಿಯ ಪಾತ್ರವೇ ಆಗಲಿ ಉಚ್ಚರಿಸುವುದು ಈ ಮಂಗಳೂರು ಎಮೆಚೂರ್ಸ್ ಸಂಘದ ತರುಣರ ಯಾವ ಅಭಿಪ್ರಾಯವನ್ನು ಸೂಚಿಸುತ್ತದೆ? ದಯಮಾಡಿ ಉತ್ತರಕೊಡುವಿರಾ.

'ಸಮಾಜ ಸುಧಾರಣೆಯ ಘನವಾದ ಉದ್ದೇಶದ ವೇಷದಿಂದ ಹೀಗೆ ಅಸಂಬದ್ಧವಾದ ಕಥೆ, ಸನ್ನಿವೇಶ, ಶಬ್ದಗಳನ್ನು ರಂಗಭೂಮಿಗೆ ತರುವ ಈ ಮಂಗಳೂರು ಎಮೆಚೂರ್ಸ್ ನಟರ ನಾಟಕ ಪ್ರದರ್ಶನಗಳಿಗೆ ಮುನ್ಸಿಪಾಲಿಟಿಯು ಅಧಿಕಾರಿಗಳು ಲೈಸನ್ಸು ಕೊಡುವುದನ್ನು ರದ್ದು ಮಾಡಿದರೆ ಅಸಭ್ಯ ರೀತಿಯನ್ನು ತಡೆಗಟ್ಟಿದ ಉಪಕಾರ ಮಾಡಿದಂತಾಗುವುದಿಲ್ಲವೇ.'

ಒಂದು ನಾಟಕವು ಯಾವುದಾದರೊಂದು 'ಸಮಾಜದ ಆಚಾರ ವಿಚಾರಗಳಿಗೆ ವಿರುದ್ಧವಾಗಿ ಕಲ್ಪಿಸ್ಪಟ್ಟಿದೆ' ಯೆಂಬುದರಿಂದ ಅವುಗಳು ಹಾನಿಕರವಾಗಿರಬೇಕೆಂಬ ನಿಯಮವಿಲ್ಲ. ಯಾವ ಸಮಾಜವೂ ದೋಷರಹಿತವಾಗಿದೆಯೆಂದು ಭಾವಿಸಲು ಶಕ್ಯವಿಲ್ಲ. ಇನ್ನಿತರ ಸಮಾಜಗಳಂತೆ ಹಿಂದೂ ಸಮಾಜದಲ್ಲಿ ಕೂಡಾ ತಿದ್ದಬೇಕಾದ ನೂರಾರು ದೋಷಗಳಿವೆ. ಇಂಥ ದೋಷಗಳನ್ನು ಬಯಲಿಗೆ ತಂದು, ಸಮಾಜವನ್ನು ಒಳಗಿನಿಂದಲೇ ಕೊರೆಯು

ತ್ತಿರುವ ಅವುಗಳನ್ನು ನಿರ್ನಾಮಗೊಳಿಸಿ, ಉದಾತ್ತವಾದುವುಗಳನ್ನು ಜಾರಿಗೆ ತರುವುದು ಸಮಾಜದ ಆಧಾರಸ್ತಂಭಗಳಂತಿರುವ ತರುಣರ ಆದ್ಯ ಕರ್ತವ್ಯವಾಗಿದೆ.

ಮಂಗಳೂರು ಎಮೆಚೂರ್ಸ್ ನಾಟಕ ಸಭೆಯವರ ಯಾವ ನಾಟಕವನ್ನು ನೀವು ವಿಮರ್ಶಿಸುತ್ತಿದ್ದೀರೆಂದು ನನಗರಿಯದು. ಪ್ರಶ್ನೆಯನ್ನು ಕೇಳುವಾಗ ನೀವು ನಾಟಕದ ಹೆಸರನ್ನೂ, ಅದರಲ್ಲಿರುವ ಆಕ್ಷೇಪಣೀಯ ಅಂಶವನ್ನೂ ತಿಳಿಸಬೇಕಿತ್ತು. ಹೇಗಿದ್ದರೂ ತರುಣರು ಮಾಡುವುದೆಲ್ಲಾ ಸರಿಯೆಂದು ನನ್ನಭಿಮತವಲ್ಲ. ಉತ್ಸಾಹದ ಭರದಿಂದ ಅವರು ಕೆಲವೊಮ್ಮೆ ಮೇರೆ ಮೀರಿ ವರ್ತಿಸುವುದುಂಟು. ಆದರೆ ಈ ವಿಚಾರದಲ್ಲಿ ಅವರು ಹೇಗೆ ವರ್ತಿಸಿರುವರೆಂದು ನನಗರಿಯದು. ಅವಾಚ್ಯ ಶಬ್ದಗಳ ಕುರಿತು ಹೇಳುವುದಿದ್ದರೆ, ತುಚ್ಛ ಪಾತ್ರಗಳು ಎಷ್ಟೊಂದು ಹೀನ ಸ್ಥಿತಿಗೆ ಬರುತ್ತವೆಂಬುದನ್ನು ತೋರಿಸಲು ಅವುಗಳ ಮೂಲಕ ಸಾಮಾಜಿಕ ನಾಟಕಗಳಲ್ಲಿ ಅವಾಚ್ಯ ಶಬ್ದಗಳನ್ನು ಹೇಳಿಸುವುದೂ ಉಂಟು.

ಸಮಾಜದಲ್ಲಿರುವ ಕುಂದು ಕೊರತೆಗಳನ್ನು ತೋರಿಸಿ ಸುಧಾರಣೆಯಾಗಬೇಕೆಂದು ಹೇಳುವವರನ್ನು ಹಳೆ ಸಂಪ್ರದಾಯದವರು ಮೆಚ್ಚುವುದಿಲ್ಲ. ನೀವು ಯಾವ ದೃಷ್ಟಿಯಲ್ಲಿ ಮಂಗಳೂರಿನ ಈ ತರುಣರನ್ನು ಟೀಕಿಸುವಿರೆಂಬುದು ನನಗರಿಯದಿದ್ದರೂ, ಅವರು ಯೋಗ್ಯ ದೃಷ್ಟಿಯಿಂದ ನಾಟಕವಾಡಿದ್ದರೆ ನಿಶ್ಚಯವಾಗಿಯೂ ನಾನವರನ್ನು ಅಭಿವಂದಿಸುತ್ತೇನೆ. ಸಮಾಜದ ಹಿತದೃಷ್ಟಿಯಿಂದ ಅವರು ಹಾಗೆ ಮಾಡಿದ್ದರೆ ಮುನ್ಸಿಪಾಲಿಟಿಯ ಅಧಿಕಾರಿಗಳು ಲೈಸನ್ಸನ್ನು ರದ್ದು ಮಾಡುವ ಪ್ರಶ್ನೆಯು ತಲೆದೋರುವುದೇ ಇಲ್ಲ. ಅನ್ಯಾಯವಾಗಿ ಯಾರನ್ನಾದರೂ ಹೀನೈಸಿದರೆ ನಿಜವಾಗಿಯೂ ಅಂತಹ ಯತ್ನಗಳನ್ನು ತಡೆಯಬೇಕು. ನಿಮಗೆ ಈ ಕುರಿತು ನನ್ನ ಸ್ಪಷ್ಟವಾದ ಅಭಿಪ್ರಾಯವು ಬೇಕೆಂದಿದ್ದರೆ ಅವರಾಡಿದ ನಾಟಕದಲ್ಲಿ ಆಕ್ಷೇಪಣಾರ್ಹವಾದ ಭಾಗವನ್ನು ತೋರಿಸುವ ಒಂದು ಪ್ರತಿಯನ್ನು ಕಳುಹಿಸಿಕೊಡಿರಿ.

---

ಗೆಳೆಯರ ತಂಡದ ಸದಸ್ಯರಾಗಿ ಅಖಿಲ ಕರ್ನಾಟಕದ ಗೆಳೆಯರೊಡನೆ ಸಂಬಂಧ ಬೆಳೆಸಿರಿ.

# ಗೆಳೆಯರ ತಂಡ

ಗೆಳೆಯರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸಿ ನಿಮ್ಮ ಲೋಕಜ್ಞಾನವನ್ನು ಹೆಚ್ಚಿಸಿರಿ.

ಗೆಳೆಯರ ತಂಡಕ್ಕೆ ಬರೆಯುವಾಗ **"ಗೆಳೆಯರ ತಂಡ", C/o ಅಂತರಂಗ, ಉಡುಪಿ,** ಎಂದು ಬರೆಯಿರಿ.

ಒಲವಿನ ಗೆಳೆಯರೆ,

ಈ ಮೊದಲೇ ತಂಡಕ್ಕೆ ಸೇರಿರುವ ಸದಸ್ಯರು ತಂಡದ ಮೇಲಿನ ಅಭಿಮಾನದಿಂದ ಹೊಸ ಹೊಸ ಗೆಳೆಯರನ್ನು ಸೇರಿಸುತ್ತಿರುವುದು ಬಹಳ ಸಂತೋಷದ ಸಂಗತಿಯಾಗಿದೆ. ಸಕಲೇಶಪುರದ ಗೆಳೆಯರಾದ ಶ್ರೀಯುತ ಎಸ್. ಕೆ. ಕರೀಂ ಖಾನ್‌ರವರು ಈ ಬಾರಿ ಇಬ್ಬರು ಹೊಸ ಗೆಳೆಯರ್ನು ಸೇರಿಸಿರುವುದಕ್ಕಾಗಿ ಅವರನ್ನು ಹಾರ್ದಿಕವಾಗಿ ಅಭಿವಂದಿಸುತ್ತೇನೆ.

ತಂಡವು ಅಭಿವೃದ್ಧಿಯ ಪಥದಲ್ಲಿ ಮುನ್ನಡೆಯುತ್ತಿದೆಯೆಂಬುದಕ್ಕೆ ಪ್ರತಿ ವಾರವೂ ತಂಡಕ್ಕೆ ಅಧಿಕ ಸಂಖ್ಯೆಯಲ್ಲಿ ಸೇರುತ್ತಿರುವ ಸದಸ್ಯರೇ ಸಾಕ್ಷಿಯಾಗಿದ್ದಾರೆ. ಗೆಳೆಯರೊಳಗೆ ಪತ್ರವ್ಯವಹಾರ ಇವೇ ಮೊದಲಾದ ಹೊಸ ಏರ್ಪಾಡುಗಳನ್ನು ಮಾಡಲು ಕನಿಷ್ಟ ಪಕ್ಷಕ್ಕೆ ೫೦ ಸದಸ್ಯರು ತಂಡಕ್ಕೆ ಸೇರಬೇಕಾಗಿರುವುದರಿಂದ ಎಲ್ಲಾ ಪ್ರಿಯ ಗೆಳೆಯರು ಈ ಕೆಲಸದಲ್ಲಿ ನೆರವಾಗುವರೆಂದು ನನ್ನ ಭರವಸೆ.

ತಂಡಕ್ಕೆ ಈ ತನಕ ಯಾವ ಸಹೋದರಿಯರೂ ಸೇರದಿರುವುದು ಬಹಳ ಶೋಚನೀಯವಾಗಿದೆ. ಆದರೆ ಉಡುಪಿಯ ಕುಮಾರಿ ವಿನೋದಾ ಬಾಯಿಯವರು ಈ ಬಾರಿ ತಂಡಕ್ಕೆ ಸದಸ್ಯರಾಗಿ ಸೇರಿ ಇತರರಿಗೊಂದು ಮಾದರಿಯನ್ನು ಹಾಕಿಕೊಟ್ಟಿದ್ದಾರೆ. ಇವರಂತೆಯೇ ಕರ್ನಾಟಕದ ವಿವಿಧ ಭಾಗಗಳಿಂದ ಸ್ತ್ರೀ ಸದಸ್ಯರೂ ಅಧಿಕ ಸಂಖ್ಯೆಯಲ್ಲಿ ತಂಡಕ್ಕೆ ಸೇರುವರೆಂದು ನಿರೀಕ್ಷಿಸಲಾಗಿದೆ.

ಈಗಾಗಲೆ ಗೆಳೆಯರ ತಂಡದ ಸದಸ್ಯರಾಗಿರುವವರು ತಮ್ಮ ಭಾವಚಿತ್ರಗಳನ್ನು ಕಳುಹಿಸಿ ಕೊಡಬೇಕಾಗಿ ಅಪೇಕ್ಷಿಸುತ್ತೇನೆ. ಈ ಕುರಿತು ವಿವರಗಳನ್ನು ತಿಳಿಯಲಪೇಕ್ಷಿಸುವವರು ನನಗೆ ಬರೆದು ತಿಳಿಯಬೇಕಾಗಿ ಬಿನ್ನಹ.

ಕಳೆದ ವಾರ ಸೂಚಿಸಿದಂತೆ ಅನೇಕ ಗೆಳೆಯರು ಪ್ರಕಟನೆಗಾಗಿ ಲೇಖನಗಳನ್ನು ಕಳುಹಿಸಿ ಕೊಟ್ಟಿದ್ದಾರೆ. ಮುಂದೆ ಅವುಗಳು ಕ್ರಮವಾಗಿ ಈ ವಿಭಾಗದಲ್ಲಿ ಪ್ರಕಟಿಸಲ್ಪಡುವವು.

ಕೆಲವು ಸದಸ್ಯರು ಪ್ರಕಟನೆಗಾಗಿ ವ್ಯಂಗ್ಯ ಚಿತ್ರಗಳನ್ನು ಕಳುಹಿಸಿ ಕೊಟ್ಟಿದ್ದಾರೆ. ನನ್ನ ಕೈ ಸೇರಿರುವ ಚಿತ್ರಗಳು ಪ್ರಕಟನೆಗೆ ಅರ್ಹವಲ್ಲವಾದರೂ, ಅವನ್ನು ಕಳುಹಿಸಿದವರು ಇನ್ನಷ್ಟು ಉತ್ಸಾಹದಿಂದ ಅಭ್ಯಾಸ ಮಾಡುತ್ತಾ ಬಂದರೆ ಉತ್ತಮ ವ್ಯಂಗ್ಯ ಚಿತ್ರಕಾರರಾಗಬಹುದೆಂದು ನನಗೆ ಭರವಸೆಯಿದೆ.

ಗೆಳೆಯರ ತಂಡಕ್ಕೆ ಸಚಿತ್ರವಾದೊಂದು ಶಿರೋನಾಮೆಯು ಬೇಕಾಗಿರುವುದರಿಂದ ಚಿತ್ರಕಲೆಯಲ್ಲಿ ಅಭಿರುಚಿಯುಳ್ಳವರು ತಮಗೆ ಯೋಗ್ಯವೆನಿಸಿದ ಹಾಗೂ ಈ ವಿಭಾಗಕ್ಕೆ ಸರಿಬೀಳಬಹುದಾದ ಚಿತ್ರವನ್ನು ಕಳುಹಿಸಬಹುದು. ಉತ್ತಮವಾದುದನ್ನು ಪಡಿಯಚ್ಚು ಮಾಡಿಸಿ ಈ ವಿಭಾಗದಲ್ಲಿ ಮುಂದೆ ಉಪಯೋಗಿಸಲಿದ್ದೇನೆ.

ಇತಿ ನಿಮ್ಮ

**"ಗೆಳೆಯ"**

---

## ತಂಡದ ಹೊಸ ಸದಸ್ಯರು.

೧೨. ಶ್ರೀ. ಹೆಚ್. ಯಂ. ರುದ್ರಪ್ಪ, ಮಾಧ್ಯಮಿಕ ಪಾಠಶಾಲಾ, ಸಕಲೇಶಪುರ.

ನಿಮ್ಮ ಸದಸ್ಯತನದ ನಂಬರು ೧೨.

೧೩. ಶ್ರೀ. ಯು. ಎಮ್. ಪುಟ್ಟಸ್ವಾಮಿ ಗೌಡ, ಮಾಧ್ಯಮಿಕ ಪಾಠಶಾಲಾ, ಸಕಲೇಶಪುರ.

ನಿಮ್ಮ ಸದಸ್ಯತನದ ನಂಬರು ೧೩.

(ಇವರಿಬ್ಬರು ಗೆಳೆಯರನ್ನು ಶ್ರೀ. ಎಸ್. ಕೆ. ಕರೀಂ ಖಾನ್‌ರವರು ಸೇರಿಸಿಕೊಟ್ಟಿರುತ್ತಾರೆ.)

೧೪. ಶ್ರೀ. ಗಣಪತಿ ಸೀತಾರಾಮ ಭಾಗವತ, ಕುಮಟಾ, ಉತ್ತರ ಕನ್ನಡ ಜಿಲ್ಲೆ.

ನಿಮ್ಮ ಸದಸ್ಯತನದ ನಂಬರು ೧೪.

೧೫. ಶ್ರೀ. ಎಮ್. ಎಸ್. ಧಾರೇಶ್ವರ, F. Y. A., ಕರ್ನಾಟಕ ಕಾಲೇಜ್, ಧಾರವಾಡ.

ನಿಮ್ಮ ಸದಸ್ಯತನದ ನಂಬರು ೧೫.

೧೬. ಕುಮಾರಿ ವಿನೋದಾ ಬಾಯಿ, ಉಡುಪಿ

ನಿಮ್ಮ ಸದಸ್ಯತನದ ನಂಬರು ೧೬.

# ಅಂತರಂಗ

**ಆದಿತ್ಯವಾರ, ದಶಂಬರ ೪, ೧೯೩೮.**

## ಬ್ರಿಟಿಷರ ಧೋರಣೆ.

ಬ್ರಿಟಿಷರಿಗೂ ಇತರರಿಗೂ ಇರುವ ಅಭಿಪ್ರಾಯ ವ್ಯತ್ಯಾಸಗಳನ್ನು ಹೋಗಲಾಡಿಸಿ, ಘರ್ಷಣೆಯನ್ನು ತಪ್ಪಿಸುವುದೇ ಬ್ರಿಟಿಷ್ ವಿದೇಶ ಧೋರಣೆಯ ತಿರುಳೆಂದು ಲಾರ್ಡ್ ಜೆಟ್ಲೆಂಡರು ಮೊನ್ನೆ ಮೊನ್ನೆ ವಿವರಿಸಿದ್ದಾರೆ. ಈ ಧೋರಣೆಯನ್ನು ಸಮರ್ಥಿಸುವುದಕ್ಕಾಗಿ ಅವರು ಐಗುಪ್ತ, ಇಟೆಲಿ, ಅಯರ್ಲೇಂಡ್ ಮತ್ತು ಭಾರತಗಳನ್ನು ಉದಾಹರಿಸಿದ್ದಾರೆ. ಆದರೆ ಭಾರತದ ವಿಚಾರದಲ್ಲಿ ಬ್ರಿಟಿಷ್ ಸರಕಾರವು ಹೇಗೆ ಘರ್ಷಣೆಯನ್ನು ತಪ್ಪಿಸಿದೆಯೆಂಬುದು ಜೆಟ್ಲೆಂಡರಿಗೇ ಗೊತ್ತು. ಪ್ರಾಯಶಃ ನವರಾಜ್ಯ ಘಟನೆಯಿಂದಾಗಿ ಭಾರತೀಯರು ತಮ್ಮ ಸ್ವಾತಂತ್ರ್ಯಾಭಿಲಾಷೆಯನ್ನು ಕಳೆದುಕೊಂಡಿರುವರೆಂದು ಅವರು ಭಾವಿಸಿದಂತಿದೆ. ಇದನ್ನು ಲಾರ್ಡ್ ಜೆಟ್ಲೆಂಡರು ನಂಬುವುದಿದ್ದರೆ ಅವರು ಭಾವನಾಸಾಮ್ರಾಜ್ಯದಲ್ಲಿ ಮನೆ ಮಾಡಿಕೊಂಡಿರುವರೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು.

## ಕಾಣೆಯಾದ ಕಿರೀಟ.

ಎಬಿಸೀನಿಯದ ರಾಜ-ರಾಜ್ಞಿಯರು ತಮ್ಮ ಸಾಮ್ರಾಜ್ಯದಿಂದ ಹೋದೊಡನೆಯೇ ಕಿರೀಟವನ್ನು ಕಳೆದುಕೊಂಡಂತೆಯೇ ಎಂಬುದು ಎಲ್ಲರಿಗೂ ತಿಳಿದಿದೆ. ಆದರೆ ಇತ್ತೀಚೆಗೆ ಹೈಲ್ ಸೆಲಾಸಿಯವರ ರಾಜ್ಞಿಯ ಸ್ವರ್ಣ ಕಿರೀಟವನ್ನು ಒಬ್ಬ ಇಟಾಲಿಯನ್ ಕದ್ದೊಯ್ದಿರುವ ವಾರ್ತೆಯು ಪ್ರಕಟವಾಗಿದೆ. ಕೈರೋ ನಗರದಲ್ಲಿ ಕಳವಿಗಾಗಿ ಒಬ್ಬ ಇಟಾಲಿಯನ್ ಸೇವಕನನ್ನು ಪೋಲೀಸರು ಸೆರೆಹಿಡಿದಿದ್ದಾರೆ. ಅವನು ತನ್ನ ಹೊಟ್ಟೆಯ ಪಾಡಿಗಾಗಿ ಕಿರೀಟಾಪಹರಣ ಮಾಡಿರುವುದಿದ್ದರೆ ಆ ಕುರಿತು ಏನನ್ನೂ ಹೇಳಬೇಕಾಗಿಲ್ಲ. ಆದರೆ ಇದೇ ಕಿರೀಟವು ಒಂದು ಸುಪ್ರಭಾತದಲ್ಲಿ ರೋಮ್ ನಗರದಲ್ಲಿ ಕಾಣಿಸಿಕೊಂಡರೆ ಅದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಕಾರಣ-ಮುಸೋಲಿನಿಗೆ ಹೇಗಾದರೂ "ಇಟಾಲಿಯನ್ ಸಾಮ್ರಾಜ್ಯ"ವನ್ನು ಸ್ಥಾಪಿಸಬೇಕಾಗಿದೆ. ಆದುದರಿಂದ ಎಬಿಸೀನಿಯದ ಹಳೆ ಚಕ್ರವರ್ತಿಯ ಕಿರೀಟವನ್ನು ಸರ್ವಾಧಿಕಾರಿ ಮುಸ್ಸೋಲಿನಿಯು ಯಾವುದಾದರೊಂದು ರೀತಿಯಲ್ಲಿ ಉಪಯೋಗಿಸಬಹುದು. ಬ್ರಿಟಿಷರ ಸ್ವಾಧೀನವಿರುವ ಭಾರತದ ಕೊಹಿನೂರಿನ ಕತೆಗೂ, ಈ ಕಿರೀಟದ ಕತೆಗೂ ಸಾಮ್ಯವಿರಬಹುದೆ?

---

೨೭ನೆ ಪುಟದಿಂದ

ಕಲ್ಕತ್ತದಲ್ಲಿರುವ ಪ್ರಸಿದ್ಧ ವಜ್ರ ವ್ಯಾಪಾರಿಗಳೊಬ್ಬರೊಂದಿಗೆ ಇವರು ಪಾಲುಗಾರರಾಗಿದ್ದರು. ಕೈಯಲ್ಲಿ ಹಣವಾದ ಬಳಿಕ ಲೇಖರಾಜರು ತಮ್ಮ ಸ್ವಂತ ವ್ಯಾಪಾರವನ್ನು ನಡೆಸ ತೊಡಗಿದರು. ಲೇಖರಾಜರಿಗೆ ಸಂಸ್ಕೃತದ ಅರಿವಿಲ್ಲ. ತುಂಬಾ ದುಡ್ಡು ಸಂಪಾದನೆಯಾದ ಬಳಿಕ ಲೇಖರಾಜರು ತಮ್ಮ ವ್ಯಾಪಾರದಿಂದ ನಿವೃತ್ತರಾಗಿ ಹೈದರಾಬಾದಿನಲ್ಲಿ ಕಳೆದ ನಾಲ್ಕು ವರುಷಗಳಿಂದ ನೆಲೆಸಿಕೊಂಡು ಬಂದಿದ್ದಾರೆ.

### ಐಂದ್ರಜಾಲದ ಅಭ್ಯಾಸ

ಭಾಯಿ ಲೇಖರಾಜರು ಕಲ್ಕತ್ತದಲ್ಲಿ ೨೦—೨೫ ವರುಷಗಳ ತನಕ ವ್ಯಾಪಾರ ಮಾಡಿದ ಬಳಿಕ ಕಾಶಿಯಲ್ಲಿ ಐಂದ್ರಜಾಲದ ರಹಸ್ಯವನ್ನು ತಿಳಿಯುವುದಕ್ಕಾಗಿ ೧೦,೦೦೦ ರೂಪಾಯಿಗಳನ್ನು ಖರ್ಚುಮಾಡಿ ಕೊನೆಗೆ ಒಬ್ಬ ಸನ್ಯಾಸಿಯ ಸಹಾಯದಿಂದ ಐಂದ್ರಜಾಲದ ನಿಗೂಢ ರಹಸ್ಯಗಳನ್ನು ತಿಳಿದರೆಂದು ಅವರ ಮೊದಲಿನ ಪಾಲುಗಾರರು ತಿಳಿಸುತ್ತಾರೆ.

### ಸ್ತ್ರೀಯರಿಗೆ ಮಾತ್ರ

ಭಾಯಿ ಲೇಖರಾಜರ ಐಂದ್ರಜಾಲ ಶಕ್ತಿಯು ಪುರುಷರೊಡನೆ ನಡೆಯದೆ ಕೇವಲ ತರುಣಿಯರ ಮೇಲೆ ತನ್ನ ಪ್ರಭಾವ ನಡೆಸುತ್ತಿರುವದೆಂದು ಭಾಯ್‌ಬಂದ್ ಸಮಿತಿಯವರು ಬರೆಯುತ್ತಾರೆ. ಚಿಕ್ಕ ಮಕ್ಕಳು ಅವರ ಅನುಯಾಯಿಗಳಾದ 'ಗೋಪಿಕಾ ಸ್ತ್ರೀ'ಯರ ಮೇಲೆ ನೀರ ಚೆಲ್ಲಿ ಹಲವು ವಿಧಗಳಲ್ಲಿ ಉಪದ್ರವಿಸುತ್ತಿದ್ದಾಗ ಲೇಖರಾಜರು ಪೋಲೀಸ್ ಸಹಾಯವನ್ನು ಪಡೆದಿರುತ್ತಾರೆ.

### ಕರಾಚಿಗೆ ಪಯಣ

ಗಂಡಂದಿರ ಸತ್ಯಾಗ್ರಹವನ್ನು ತಡೆಯಲಾರದೆ ಭಾಯಿಲೇಖರಾಜರು ೧೫೦ ಮಂದಿ ಶಿಷ್ಯೆಯರೊಡನೆ ಕರಾಚಿ ನಗರಕ್ಕೆ ತೆರಳಿದ್ದಾರೆ. ಅವರ ಶಿಷ್ಯೆಯರ ಹೆಚ್ಚಿನ ಗಂಡಂದಿರು, ಪುನರ್ವಿವಾಹ ಮಾಡಿಕೊಳ್ಳುವ ಯೋಚನೆಯಲ್ಲಿದ್ದಾರೆ. ಲೇಖರಾಜರ ಇಂದ್ರಜಾಲದಿಂದ ಕರಾಚಿಯಲ್ಲಿ ಎಷ್ಟು ತರುಣಿಯರು ತಮ್ಮ ಗಂಡಂದಿರಿಂದದೂರವಾಗುವರೆಂದು ನೋಡಬೇಕಾಗಿದೆ.

# ಜಗತ್ತಿನ ಅವಳಿ ಮಕ್ಕಳ ವೈಚಿತ್ರ್ಯ

ಜಗತ್ತಿನ ನೂರಾರು ನಿಗೂಢ ವಿಷಯಗಳಲ್ಲಿ ಅವಳಿ ಮಕ್ಕಳ ಜನನವೂ ಸೇರಿಕೊಂಡಿದೆ. ನಿಸರ್ಗದ ನಿಯಮವನ್ನು ಮೀರಿ ನಡೆಯುವ ಪ್ರತಿಯೊಂದು ವಿಚಾರವೂ ಜನತೆಯಲ್ಲಿ ಆಶ್ಚರ್ಯವನ್ನುಂಟು ಮಾಡುತ್ತದೆ. ಮನುಷ್ಯ ದೇಹಕ್ಕೆ ಪ್ರಾಣಿಯ ಮುಖ, ಪ್ರಾಣಿಯ ದೇಹಕ್ಕೆ ಮನುಷ್ಯ ಮುಖ ಇವೇ ಮೊದಲಾದ ವಿರೂಪಗಳು ಎಂಥವರನ್ನೂ ಆಶ್ಚರ್ಯಕ್ಕೀಡು ಮಾಡುತ್ತವೆ.

○○

ಒಮ್ಮೆಯೇ ಒಂದಕ್ಕಿಂತ ಹೆಚ್ಚು ಮಕ್ಕಳು ಹುಟ್ಟುವುದು ಸಾಧ್ಯವೆಂಬುದು ಹೆಚ್ಚಿನವರಿಗೆ ತಿಳಿದಿದೆ. ಇತ್ತೀಚೆಗೆ ಒಮ್ಮೆಯೇ ಆರು ಮಕ್ಕಳು ಹುಟ್ಟಿ ಇನ್ನೂ ಬದುಕಿಕೊಂಡಿರುವುದನ್ನು ಕಂಡು ಜಗತ್ತು ಆಶ್ಚರ್ಯಪಟ್ಟಿದೆ. ನಾವು ಭಾವಿಸುವಂತೆ ಈ ಅವಳಿ ಜನನಗಳು ಅಷ್ಟೊಂದು ಅಪರೂಪವಲ್ಲ. ಪ್ರತಿ ೭ ವರುಷಕ್ಕೊಮ್ಮೆ ಕನಿಷ್ಟಪಕ್ಷಕ್ಕೆ ಒಂದು ಅವಳಿ ಜನನವಾಗುತ್ತದೆಂದು ವೈದ್ಯಕೀಯ ಮಂಡಲದವರು ಕಂಡು ಹಿಡಿದಿದ್ದಾರೆ. ೧೬೯೪ರಿಂದ ಇಂತಹ ೩೦ ಜನನಗಳಾಗಿವೆಯೆಂದು, ವೈದ್ಯಕೀಯ ಚರಿತ್ರೆಯು ಹೇಳುತ್ತಿದೆ.

○○

ಇಷ್ಟರ ತನಕ ಒಮ್ಮೆಯೇ ಆರಾರು ಮಕ್ಕಳಂತೆ ಐದು ಜನನಗಳಾಗಿವೆ. ೧೬೦೦ನೆ ಇಸವಿ ಜನವರಿ ೩ರಂದು ಅಪರಾಹ್ನ ೩ ತಾಸಿಗೆ ಹೆಮ್ಲಿನ್ಸ್ ನಗರದಲ್ಲಿ ೭ ಮಕ್ಕಳು ಒಮ್ಮೆಯೇ ಜನಿಸಿದರೆಂದು ಚರಿತ್ರೆಯು ಹೇಳುತ್ತಿದೆ.

○○

ಬ್ರಿಟಿಷ್ ಮೆಡಿಕಲ್ ಜರ್ನಲ್ ಎಂಬ ಪತ್ರಿಕೆಗನುಸಾರವಾಗಿ ಅವಳಿ ಮಕ್ಕಳು ಕಪ್ಪು ಜನಾಂಗದಲ್ಲಿ ಹೆಚ್ಚಾಗಿ ಹುಟ್ಟುತ್ತವೆಂದು ತಿಳಿಯಲಾಗಿದೆ. ಪೀತವರ್ಣೀಯರಲ್ಲಿ ಅವಳಿ ಮಕ್ಕಳ ಜನನವಾಗುವುದು ಬಹಳ ಅಪರೂಪ ರಷ್ಯವು ಅವಳಿಮಕ್ಕಳ ವಿಚಾರದಲ್ಲಿ ತುಂಬಾ ಮುಂದರಿದಿದೆ. ಪ್ರತಿ ೪೩ ಜನನಗಳಲ್ಲಿ ಒಂದು ಅವಳಿಜನನವಾಗುವುದೆಂದು ರಷ್ಯದ ವೈದ್ಯಕೀಯ ಇಲಾಖೆಯು ಪ್ರಕಟಿಸಿದೆ.

○○

ಶಿಶು ಜನನದ ಚರಿತ್ರೆಯನ್ನು ನೋಡುವುದಿದ್ದರೆ ಯಾವುದಾದರೊಂದು ಕುಟುಂಬದಲ್ಲಿ ಅವಳಿ ಮಕ್ಕಳು ಹುಟ್ಟಿದ್ದರೆ, ಆ ಕುಟುಂಬದ ಹೆಚ್ಚಿನ ಸ್ತ್ರೀಯರು ಅವಳಿಮಕ್ಕಳನ್ನು ಹಡೆಯುವರೆಂದು ತಿಳಿಯಬಹುದಾಗಿದೆ. ೧೨೦೦ ಅವಳಿ ಜನನಗಳಲ್ಲಿ ೪೮ ಜನನಿಯರು ಎರಡು ಬಾರಿ ಅವಳಿ ಮಕ್ಕಳನ್ನು ಹಡೆದಿದ್ದಾರೆ. ಮೂವರು ಮೂರು ಬಾರಿ, ಒಬ್ಬಳು ನಾಲ್ಕು ಬಾರಿ.

○○

ಚೀನದಲ್ಲಿರುವ ಹಾಂಗ್-ಕಾಂಗ್ ನಗರದಲ್ಲಿ ಒಬ್ಬ ಜನನಿಯಿದ್ದಾಳೆ. ಆಕೆಯ ಪ್ರಾಯ

## ವೈಜ್ಞಾನಿಕರನ್ನು ದಿಗಿಲು...

ಕೇವಲ ೪೫ ವರುಷಗಳಾದರೂ ಅವಳಿಗೆ ೪೨ ಮಕ್ಕಳಿವೆ ಜರ್ಮನ್ ಮಿಶನೆರಿಗಳ ವರದಿಗನುಸಾರವಾಗಿ ಆ ಚೀನೀಜನನಿಯು ೮ ಬಾರಿ ಅವಳಿ ಮಕ್ಕಳನ್ನೂ, ೫ ಬಾರಿ



The Famous Dionne (

ಮೂರು ಮೂರು ಮಕ್ಕಳನ್ನೂ, ಒಮ್ಮೆ ೫ ಮಕ್ಕಳನ್ನೂ ಇನ್ನೊಮ್ಮೆ ೬ ಮಕ್ಕಳನ್ನೂ ಹೆತ್ತಿದ್ದಾಳೆ.

○○

ಬವೇರಿಯದ ಪ್ರೊ. ಬರ್ನಾರ್ಡ್ ಷೀನ್‌ಬರ್ಗ್ ಎಂಬಾಕೆ ೬೯ ಮಕ್ಕಳನ್ನು ಹಡೆದು ೧೬೭೮ರಲ್ಲಿ ತೀರಿಕೊಂಡಳೆಂಬುದಕ್ಕೆ ಆಕೆಯ ಗೋರಿಯ ಕಲ್ಲೇ ಸಾಕ್ಷಿಯಾಗಿದೆ. ೬೯ ಮಕ್ಕಳಲ್ಲಿ ನಾಲ್ಕರಂತೆ ಹುಟ್ಟಿದವುಗಳು ಕೆಲವು, ಮೂರರಂತೆ ಜನಿಸಿದವುಗಳು ಹಲವು, ಅಲ್ಲದೆ ೧೬ ಅವಳಿ ಮಕ್ಕಳು. ಆಕೆಯ

ಗಂಡ
ಪುನಃ
ಳನ್ನು
ವೃ
ದೆಂದು
ಗಳಿಂದ
ಹ್ಯಾವ
ಮ
ಬ
ಸ
ಮದ

# ಸ್ತ್ರೀಯೋ ಏಳು ಮಕ್ಕಳ ಜನನ!

## ನಿಗೂಢ ಶಿಶುಗಳು

ಯಲ್ಲಿ ದುಡಿದರು, ಒಂದೇ ಕಾಲದಲ್ಲಿ ತೀರಿಕೊಂಡರು. ಅವರಿಬ್ಬರನ್ನೂ ಒಂದೇ ಸ್ಥಳದಲ್ಲಿ ಹುಗಿದರು.

೦೦

ಜೆಕೊಸ್ಲೊವೇಕಿಯದ ಝುವರ್ ಎಂಬಲ್ಲಿ ಅವಳಿ ಮಕ್ಕಳೂ ಮೂರು ಮಕ್ಕಳೂ ಒಮ್ಮೆಯೇ ಹುಟ್ಟುತ್ತಿರುವುದನ್ನು ಕಂಡು ವೈಜ್ಞಾನಿಕರು ದಿಙ್ಮೂಢರಾಗಿದ್ದಾರೆ.

೦೦

ಡೆಟ್ರಾಯ್ಟ್ ನಗರದಲ್ಲಿ ಇಬ್ಬರು ಅವಳಿಕುಮಾರಿಯರಿದ್ದಾರೆ. ಇಬ್ಬರೂ ಒಂದೇ ತರದ ಆಹಾರವನ್ನು ಸೇವಿಸುತ್ತಾರೆ. ಯುನೈಟೆಡ್ ಸ್ಟೇಟ್ಸಿನ ನ್ಯೂರಾಷೆಲ್ ಎಂಬಲ್ಲಿ ೧೭ ವರುಷ ಪ್ರಾಯದ ಇಬ್ಬರು ತರುಣಿಯರಿದ್ದಾರೆ. ಇವರಿಬ್ಬರ ಭಾರ, ಎತ್ತರ ಮೊದಲಾದುವುಗಳು ಒಂದೇ ತೆರನಾಗಿವೆ.

೦೦

ಜಗತ್ತಿನಲ್ಲಿ ಈಗಲೂ ಜೀವಂತವಾಗಿರುವ ಅವಳಿ ಸಹೋದರಿಯರೆಂದರೆ ಫಿಲಡೆಲ್ಫಿಯಾ ಎಂಬಲ್ಲಿಯ ಸತೀ ಬರ್ತ್ ಬೆಡಿನ್ ಫೆಲ್ಡ್ ಮತ್ತು ಸತೀ ಎಮ್ಮಾ ಕ್ರಾಸ್ ಎಂಬವರು. ಅಮೇರಿಕದ ೩೨ ಅಧ್ಯಕ್ಷರ ಪೈಕಿ ಅವರಿಬ್ಬರು ೩೨ ಅಧ್ಯಕ್ಷರನ್ನು ಕಂಡಿದ್ದಾರೆ.

ಇವರಿಬ್ಬರ ಗಂಡಂದಿರು ೧೮೮೮ ರಲ್ಲಿ ತೀರಿಕೊಂಡರು. ಇವರಿಬ್ಬರೂ ಮೊನ್ನೆ ತಮ್ಮ ೭೫ನೆಯ ಜನ್ಮದಿನೋತ್ಸವವನ್ನು ಸಂಭ್ರಮದಿಂದ ಆಚರಿಸಿದರು.

೦೦

ಅವಳಿ ಮಕ್ಕಳು ನೋಡಲಿಕ್ಕೆ ಒಂದೇ ರೀತಿಯಾಗಿರುವುದರಿಂದ ಅನೇಕ ತಂದೆ ತಾಯಿಗಳಿಗೆ ತಮ್ಮ ಮಕ್ಕಳಲ್ಲಿ ಯಾರು ಯಾರೆಂಬುದನ್ನು ಕಂಡು ಹಿಡಿಯಲು ಬಹಳ ಪ್ರಯಾಸವಾಗುತ್ತದೆ. ಅವಳಿ ಮಕ್ಕಳಿಗೆ ಏಕಕಾಲದಲ್ಲಿ ಕಾಹಿಲೆಯಾಗುವುದು ಒಂದು ವಿಚಿತ್ರವಾಗಿದೆ. ಇಂಗ್ಲೆಂಡಿನ ಅವಳಿ ಸಹೋದರರಲ್ಲಿ ಒಬ್ಬನಿಗೆ ಹಲ್ಲು ನೋವಾದುದೇ ತಡ, ಇಬ್ಬರೂ ತಮ್ಮ ನೋವಿನ ಹಲ್ಲುಗಳನ್ನು ತೆಗೆಸಬೇಕಾಯಿತು.

೦೦

ಒಂದೇ ಮನೋವೃತ್ತಿ, ಒಂದೇ ಕಾಲದಲ್ಲಿ ಜನನ, ಒಂದೇ ಕಾಲದಲ್ಲಿ ಮರಣ, ಇವೇ ಮೊದಲಾದ ಹಲವು ವಿಷಯಗಳು ವೈಜ್ಞಾನಿಕರಿಗೆ ಈಗಲೂ ಒಂದು ಸಮಸ್ಯೆಯಾಗಿ ನಿಂತಿವೆ. ಈ ಸಮಸ್ಯೆಯನ್ನು ಇಷ್ಟರ ತನಕ ಯಾರೂ ಬಿಡಿಸಲಿಲ್ಲ!

## ಓಂ ಮಂಡಲಿಯ ರಹಸ್ಯ

### ಭಾಯಿಾ ಲೇಖರಾಜರ ಐಂದ್ರಜಾಲ!

### ಹೈದರಾಬಾದಿನಿಂದ 'ಓಂ ನಿವಾಸ'ವನ್ನು ಕರಾಚಿಗೊಯ್ದರು!

ಓಂ ಮಂಡಲಿ! ಸಿಂಧ ಪ್ರಾಂತ್ಯದ ಗಂಡಂದಿರಿಗೆ ಈ ಹೆಸರನ್ನು ಕೇಳಿದೊಡನೆಯೇ ಎದೆ ಧಸಕ್ಕೆನ್ನುತ್ತಿದೆ. ತಮ್ಮ ಮಮತೆಯ ಮಡದಿಯರನ್ನು ಕಳೆದುಕೊಳ್ಳುವುದಕ್ಕಿಂತ ಮಹತ್ವದ ನಷ್ಟವು ಬೇರಾವುದಿದೆ? ಊರವರ ಪ್ರಚಂಡ ಸತ್ಯಾಗ್ರಹವನ್ನು ಲೆಕ್ಕಿಸದೆ, ಗಂಡಂದಿರೊಡನೆ ನಡೆಸಿದ ಮಧುರಜೀವನವನ್ನು ಮರೆತು ಬಿಟ್ಟು, ಸುಂದರಿಯರಾದ ನಲ್ಲೆಯರು ಮುದುಕನೊಬ್ಬನೊಡನೆ ಜೀವಿಸಲು ಹೋದುದೇಕೆ? ಈ ಪ್ರಶ್ನೆಗೆ ಸರಿಯಾದ ಉತ್ತರವು ಇಷ್ಟರ ತನಕ ಸಿಗಲಿಲ್ಲ. ಆದರೆ ಹೈದರಾಬಾದಿನ(ಸಿಂಧ) ಭಾಯ್ಬಂದ್ ಸಮಿತಿಯವರು ಓಂ ಮಂಡಲಿಯ ರಹಸ್ಯವನ್ನು ಮೊನ್ನೆ ಬಯಲಿಗೆಳೆದಿದ್ದಾರೆ.



### ವಜ್ರ ವ್ಯಾಪಾರಿ ಲೇಖರಾಜ

ತರುಣಿಯರ ಮನ ಸೆಳೆಯುವಷ್ಟು 'ತಪಶ್ಶಕ್ತಿ'ಯುಳ್ಳ ಓಂಮಂಡಲಿಯ ಸಂಸ್ಥಾಪಕರಾದ ಭಾಯಿಾ ಲೇಖರಾಜರು ೬೮ವರುಷ ಪ್ರಾಯದ ಮುದುಕ. ಸಂಸಾರದ ಎಲ್ಲಾ ಸುಖಗಳನ್ನು ಅನುಭವಿಸಿದ್ದಾರೆ.

(೩೫ನೆ ಪುಟ ನೋಡಿರಿ)

# ಭಗದತ್ತನ ಬಹಿರಂಗ ಪತ್ರಗಳು

ಐರೋಪ್ಯ ರಾಷ್ಟ್ರಗಳ ಅಧಿಕಾರಿಗಳಿಗ,

ಬಿಳಿಜನರೆ,

ನೀವು ಪರಸ್ಪರ ಹೊಡೆದಾಡಿಕೊಳ್ಳುವುದನ್ನು ಕಂಡು ನನಗೆ ಬಹಳ ಸಂತೋಷವಾಗಿದೆ. ಬ್ರಿಟಿಷರು ತಮ್ಮ ಸಾಮ್ರಾಜ್ಯದಲ್ಲಿ ಮಾಡುತ್ತಿರುವ ಅತ್ಯಾಚಾರಗಳನ್ನು ಹಿಟ್ಲರನು ಬಯಲಿಗೆತರುತ್ತಿದ್ದಾನೆ. ಯೆಹೂದಿಯರನ್ನು ಪೀಡಿಸುವುದನ್ನು ಖಂಡಿಸಿದ್ದಕ್ಕೆ ಇದೇ ಹಿಟ್ಲರನ ಉತ್ತರ. ವಜೀರ ಸ್ಥಾನದಲ್ಲಿ ಬ್ರಿಟಿಷರ ಅನ್ಯಾಯ, ಜಾಲಿಯನ್‌ವಾಲಾಬಾಗಿನ ಅತ್ಯಾಚಾರ, ಇವೆಲ್ಲವನ್ನೂ ನಾಝಿೂ ಹಿಟ್ಲರನು ಖಂಡಿಸತೊಡಗಿದ್ದಾನೆ. ಕಾಲವೊಂದಿತ್ತು, ಆಗ ನೀವು ಕಪ್ಪು ಜನರನ್ನು ಸಂಘಟಿತರಾಗಿ ಪೀಡಿಸುತ್ತಿದ್ದಿರಿ. ಈಗ ನೀವೇ ಹೊಡೆದಾಡಿಕೊಂಡು ನಾಶವಾಗುವುದುತ್ತಮ. ನಿಮ್ಮನ್ನು ಕಂಡು ಪೀಡೆಗೊಳಗಾಗಿರುವ ಕಪ್ಪುಜನರು ಒಂದಾಗಿದ್ದಾರೆ. "ಬಿಳಿಕಾಲ"ವು ಕಳೆದುಹೋಯಿತು. "ಕಪ್ಪುಕಾಲ" ಬರುತ್ತಿದೆ.

ಇತಿ

**ಕಲಹಪ್ರಿಯ ಭಗದತ್ತ.**

ಮದ್ರಾಸ್ ಕಾಂಗ್ರೆಸ್ ವಿಧಾಯಕ ಪಕ್ಷದವರಿಗೆ,

ಬಾಂಧವರೆ,

ನಿಮ್ಮೊಳಗೆ ಸ್ವಲ್ಪ ಅಭಿಪ್ರಾಯ ವ್ಯತ್ಯಾಸವುಂಟಾಗಿ ನೀವು ಅಹಿಂಸಾತ್ಮಕವಾದ ಪರಸ್ಪರ ಯುದ್ಧ ಮಾಡತೊಡಗಿದ್ದೀರೆಂದು ವಾರ್ತೆಯು ಮೆಲ್ಲಮೆಲ್ಲನೆ ಹೊರಬರುತ್ತಿದೆ. ನಿಮ್ಮಲ್ಲಿ ಅಭಿಪ್ರಾಯ ವ್ಯತ್ಯಾಸಗಳಿವೆಯೆಂದು ನನಗೆ ಈ ಮೊದಲೇ ತಿಳಿದಿದೆ. ಕೆಲವೊಮ್ಮೆ ನಿಮ್ಮ ಮಂತ್ರಿಗಳು ತಮ್ಮ ಧೋರಣೆಯನ್ನು ಸಮರ್ಥಿಸಲುಸರ್ವಾಧಿಕಾರತ್ವವನ್ನು ಉದಾಹರಿಸಿದ್ದುಂಟು. ಸರಿ. ಸರಿ. ಖರೆ ಪ್ರಕರಣದಲ್ಲಿ ಸುಭಾಷರು ಜರ್ಮನಿ ಇಟಲಿಗಳನ್ನು ಉದಾಹರಿಸಿದರು. ಸರ್ದಾರ್ ಪಟೇಲರು 'ಸವ್ಯಾ-ಹಿಟ್ಲರ್'' ಎಂದು ಕರೆದುಕೊಳ್ಳಲಿಚ್ಛಿಸಿದರು. ಪ್ರಜಾಸತ್ತೆಗೆ ಇವೆಲ್ಲವನ್ನೂ ಕಂಡು ನಡುಕವುಂಟಾಗಿದೆ. ಕಾಂಗ್ರೆಸ್ ಸರ್ವಾಧಿಕಾರಿತ್ವದೆಡೆಗೆ ನಾಗಾಲೋಟದಿಂದ ಮುನ್ನಡೆಯುತ್ತಿದೆಯೆ? ನಿಮ್ಮ ಪಕ್ಷದಲ್ಲಿ ಧುರೀಣರು ಸದಸ್ಯರ ಅಭಿಪ್ರಾಯವನ್ನು ಕೇಳುವ ಪದ್ಧತಿಯೇ ಇಲ್ಲವಂತೆ. ಆದುದರಿಂದ ಕೆಲವರು ತಮ್ಮ ಸ್ಥಾನಗಳಿಗೆ ರಾಜಿಕೊಟ್ಟಿರುವರಂತೆ. ವಿದ್ಯಾಮಂತ್ರಿಗಳೂ, ಕುದುರೆ ಜೂಜಿನ ಕ್ಲಬ್ಬಿನ ಅಧ್ಯಕ್ಷರೂ (Steward)ಆದ ಡಾ. ಸುಬ್ಬರಾಯನರಿಗೂ, ಶ್ರೀ. ಕೆ. ಆರ್. ಕಾರಂತರಿಗೂ ಜಟಾಪಟಿಯಾಯಿತಂತೆ. ಸುಬ್ಬರಾಯನರು ಶಿಸ್ತಿನ ಕುರಿತುಭಾಷಣಕೊಟ್ಟರಂತೆ. ಪಕ್ಷದ ಅಭಿಪ್ರಾಯ ಕೇಳದೆ ಸರಾಸರಿ ನಿಯಮಾತಿಕ್ರಮಣದ ಹಾಡನ್ನು ಹಾಡುವುದು ವಿಹಿತವೇ? ಹೇಗಿದ್ದರೂ ಸರ್ವಾಧಿಕಾರಿತ್ವಕ್ಕೆ ಮರುಳಾಗಿ ಭಾರತವನ್ನು ಹಿಟ್ಲರ್-ಮುಸಲೋನಿಯರ ರಾಜ್ಯದಂತೆ ಮಾಡಬಾರದಾಗಿ ಅಪೇಕ್ಷಿಸುವ,

**ಕಾಂಗ್ರೆಸ್‌ಪ್ರಿಯ ಭಗದತ್ತ.**

## ಪುರಾಣದ ಬದನೆಕಾಯಿ

ದೇವಸ್ಥಾನದ ಪೌಳಿಯ ನೋಲೆ,
ನೆರೆದಿಹ ವಿಧವೆಯರೆಲ್ಲರ ಮುಂದೆ,
ತಿಪ್ಪಾ ಶಾಸ್ತ್ರಿಗಳಾಸನ ಹಾಕಿ
ಬಿಚ್ಚುತಲಿದ್ದರು ಪುರಾಣ ಕಂತೆ.
ಶಾಸ್ತ್ರಿಗಳರ್ಧಾಂಗಿಯರೂ ಬಂದು
ಕುಳಿತಿದ್ದರು ತಾ ಮೂಲೆಯೊಳೊಂದು.

ಯಾವುದೊ ಮಾಸದ ಮಹಾತ್ಮೆ ಹೇಳಿ
ಅಭೋಜ್ಯ ವಸ್ತುಗಳೆಲ್ಲರ ದೂರಿ,
"ಬದನೇ ಕಾಯಿಯ ತಿಂದರೆ ನೋಡಿ,
ನರಕ ತಪ್ಪದದು" ಎಂದರು ಸಾರಿ.
ಶಾಸ್ತ್ರಿಗಳರ್ಧಾಂಗಿಯರದ ಕೇಳಿ
ಗಾಬರಿಯಾದರು ದುಃಖವ ತಾಳಿ.

ಮರುದಿನ ಶಾಸ್ತ್ರಿಯು ಪೇಟೆಗೆ ಹೋಗಿ
ಮೂರು ಬದನೆಗಳ ತಂದನು ಮನೆಗೆ;
"ತೊಗರೀ ಬೇಳೆಯ ಹಾಕುತಲಿದನು
ಸಾಂಬಾರ್ ಮಾಡೆ"ಂದನು ಹೆಂಡತಿಗೆ.
"ಅಯ್ಯೋ, ಏನಿದ ಹೇಳುತಲಿಹಿರಿ?
ಬದನೆ" ತಿಂದರೆ ರೌರವವೆ ಸರಿ!"

ಶಾಸ್ತ್ರಿಗಳೆಂದರು "ಅಯ್ಯೋ ಪೆಚ್ಚೆ!
ಅದನೆಲ್ಲವ ನೀನಂಬಿದೆಯೇನು?
ಪುರಾಣದೊಳಗಿಹ ಬದನೇ ಕಾಯಿ
ತಿನ್ನಲು ಬಾರದು; ಇದಕ್ಕೆ ಏನು?
ತುಪ್ಪದ ಒಗ್ಗರಣೆಯನಿದಕಿತ್ತು,
ಸಾಂಬಾರ್ ಮಾಡೇ ಇದನೀಪೊತ್ತು!"

---

## ಸ್ವರ್ಗೀಯ ಶೌಕತಾಲಿಯವರು



### ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರ ಯೋಧ

ಖಿಲಾಫತ್ ಚಳವಳದ ಕಾಲದಲ್ಲಿ ಗಾಂಧಿಜಿಯ ವರಷ್ಟೇ ಪ್ರಾಮುಖ್ಯತೆಯನ್ನು ಪಡೆದು, ರಾಷ್ಟ್ರದ ಸ್ವಾತಂತ್ರ್ಯ ಸಮರದಲ್ಲಿ ಕೆಚ್ಚೆದೆಯ ವೀರರಂತೆ ಭಾಗ ವಹಿಸಿ ಕೊನೆಯ ವರೆಗೂ ಸಾರ್ವಜನಿಕ ರಂಗದಲ್ಲಿ ತನ್ನ ಪಾಲಿನ ಸೇವೆಯನ್ನು ಸಲ್ಲಿಸುತ್ತಿದ್ದ ಮೌಲಾನಾ ಶೌಕತಾಲಿಯವರು ಕಳೆದ ನವಂಬರ ೨೬ರಂದು ಹೃದ್ರೋಗದಿಂದ ಢಿಲ್ಲಿಯಲ್ಲಿ ನಿಧನಹೊಂದಿದರು.

ಪಂಡಿತ ನೆಹರುಗಳು ತನ್ನ ಹಾರ್ದಿಕ ಸಂತಾಪವನ್ನು ಸೂಚಿಸುತ್ತಾ-ಮೌಲಾನಾ ಶೌಕತಾಲಿಯವರು ಸ್ವಾತಂತ್ರ್ಯ ಸಮರದ ಧೀರಯೋಧರಲ್ಲೊಬ್ಬರಾಗಿದ್ದರು; ತನ್ನ ಸಹೋದರ ಮೌ. ಮಹಮ್ಮದಾಲಿಯವರೊಂದಿಗೆ ಅವರು ಭಾರತದ ಮುಸಲ್ಮಾನರಲ್ಲಿ ತಲೆದೋರಿದ ನವಶಕ್ತಿಯ ಚಿಹ್ನೆಯಂತಿದ್ದರು. ಹದಿನೆಂಟು ವರುಷಗಳ ಹಿಂದಿನ ಅಸಹಕಾರ ಚಳವಳ ಕಾಲದಲ್ಲಿ ಅವರ ವ್ಯಕ್ತಿತ್ವದ ಪ್ರಭಾವವು ಭಾರತದ ಸಂದುಗೊಂದುಗಳಲ್ಲಿ ಹಬ್ಬಿತ್ತು." ಎಂದು ಹೇಳಿದ್ದಾರೆ.

"ಅವರು ಎಲ್ಲಾ ದೃಷ್ಟಿಯಲ್ಲಿಯೂ 'ದೊಡ್ಡಣ್ಣ"ನವರಾಗಿದ್ದರು. ಮೌಲಾನಾ ಶೌಕತಾಲಿಯವರನ್ನು ಕಂಡೊಡನೆಯೇ ಅದೊಂದು ತರದ ಧೈರ್ಯಬರುತ್ತಿತ್ತು"ಎಂದು ಶರತ್ ಚಂದ್ರಬೋಸರು ಹೇಳಿದ್ದಾರೆ. "ಅವರು ಹಿಂದು-ಮುಸ್ಲಿಮ್ ಐಕ್ಯದ ಪ್ರವಾದಿಯಾಗಿದ್ದಾರೆಂ"ದು ಡಾ| ಗೋಪಿಚಂದ ಭಾರ್ಗವರು ಅಭಿಪ್ರಾಯಪಟ್ಟಿದ್ದಾರೆ. ಭಾರತದ ಹಲವೆಡೆಗಳಲ್ಲಿ ಹರತಾಳವನ್ನಾಚರಿಸಲಾಗಿದೆ.

ಇವರ ಆತ್ಮಕ್ಕೆ ಶಾಂತಿಯಿರಲಿ.

---

# ಇಲ್ಲಿದೆ ನಗು

**ಅತ್ಯವಶ್ಯ!**

(ಇಬ್ಬರು ಸ್ನೇಹಿತರು ಮಾತಾಡಿಕೊಳ್ಳುತ್ತಿದ್ದರು.)

ಒಬ್ಬ:— ಹೌದೊ, ರಮಾನಾಥನಿಗೆ ೫ರೂಪಾಯಿ ಬೇಕಂತೆ, ಕೊಡಬಹುದೊ? ತೆಗೆದುಕೊಂಡರೆ ಹಿಂದೆ ಕೊಡುವ ಅಭ್ಯಾಸವೇ ಇಲ್ಲವಲ್ಲಾ ಈಗಿನವರಿಗೆ.

ಇನ್ನೊಬ್ಬ.— ಅವಶ್ಯವಾಗಿ ಕೊಡಬಹುದು.

ಒಬ್ಬ:— ಅದೇನು ಹಾಗೆ?

ಇನ್ನೊಬ್ಬ:— ಅದು ಹಾಗೆಯೇ, ನೀನು ಕೊಡದಿದ್ದರೆ ಅವನು ನಿನ್ನಿಂದ ಹೇಗಾದರೂ ತೆಗೆದುಕೊಳ್ಳುತ್ತಾನೆ.

೦೦ ೦೦೦ ೦೦

**ನಿಜವಾದ ಆಹಾರ!**

ನಟಿ:— ನಾನು ಸರಿಯಾಗಿ ಅಭಿನಯಿಸಬೇಕಾದರೆ ನನಗೆ ಔತಣ ದೃಶ್ಯದಲ್ಲಿ ನಿಜವಾದ ಆಹಾರವನ್ನು ಕೊಡಬೇಕು.

ಸಿನೆಮಾ ಮೆನೇಜರ್:— ನಿಮ್ಮ ಹಠ ಬಿಡುವುದಿಲ್ಲ ನೀವು! ಆದರೆ ಮರಣ ದೃಶ್ಯದಲ್ಲಿ ನಿಜವಾದ ವಿಷವನ್ನು ನೀವು ತೆಗೆದುಕೊಳ್ಳಬೇಕಾದೀತು.

೦೦ ೦೦೦ ೦೦

**ಸುಲಭೋಪಾಯ.**

"ನಾನು ಸಿಗರೇಟು ಸೇದುತ್ತೇನೆಂಬ ಒಂದೇ ಅಡ್ಡಿ ಹೇಳಿ ಹೆಂಡತಿ ನನ್ನನ್ನು ಬಿಟ್ಟುಬಿಟ್ಟಳು." ಡಿ ಸಿಲ್ವರು ಹೇಳಿದರು.

ಸಲ್ದಾನರಿಗೆ ತನ್ನ ಮಡದಿಯಿಂದ ದೂರವಾಗಬೇಕಾದುದರಿಂದ ಕುತೂಹಲದಿಂದ ಕೇಳಿದರು:- "ಸಿಗರೇಟು ಪೆಟ್ಟಿಗೆಗೆ ಕ್ರಯವೆಷ್ಟು?"

೦೦ ೦೦೦ ೦೦

**ವ್ಯತ್ಯಾಸ.**

ವಿಮಲೆ:— "ಹೌದೇನೆ ಲಕ್ಷ್ಮಿ, ನೀನು ಎಷ್ಟು ಒಳ್ಳೆಯವನನ್ನೂ ಮದುವೆಯಾಗುವುದಿಲ್ಲವೆಂದು ಹೇಳುತ್ತಿದ್ದಿಯಲ್ಲವೆ?"

ಲಕ್ಷ್ಮಿ:— "ಹೌದು"

ವಿಮಲೆ:— "ಹಾಗಾದರೆ ಈಗ ಮದುವೆಯಾದಿಯಲ್ಲಾ?"

ಲಕ್ಷ್ಮಿ:— "ಹೌದು, ಏನಾಯಿತು? ನನ್ನ ಗಂಡ ಅಷ್ಟೊಂದು ಒಳ್ಳೆಯವರಲ್ಲ!"

———



"ಅಬ್ಬಾ! ಲೀಲೂ, ಒಂದಿಷ್ಟು ನಾಚಿಕೆ ಇಲ್ವೇನೆ, ಗಂಡ್ರಾಮಿ?"
"ಎಂಥಾ ನಾಚಿಕೆಯಮ್ಮಾ, ನೀನೂ ಹೀಗೆ ಮಾಡಿಲ್ವೆ ಮೊದ್ಲು?"



ನಿರುದ್ಯೋಗಿಗಳು ಹಿಂದುಸ್ಥಾನದಲ್ಲಿಯೂ ಇದ್ದಾರೆ; ಇಂಗ್ಲೆಂಡಿನಲ್ಲಿಯೂ ಇದ್ದಾರೆ. ಎರಡು ಕಡೆಯವರಿಗೂ ತಿಂಗಳಿಗೈವತ್ತೈವತ್ತು ಸಿಕ್ಕುತ್ತದೆ.

೦ ೦ ೦

ಯಾವುದು ಕೇಳುವಿರಾ? ಇಂಗೆಂಡಿನಲ್ಲಿರುವವರಿಗೆ ತಿಂಗಳಿಗೈವತ್ತು ರೂಪಾಯಿ; ಹಿಂದುಸ್ಥಾನದಲ್ಲಿರುವವರಿಗೆ ತಿಂಗಳಿಗೈವತ್ತು ಹೊತ್ತು ಉಪವಾಸ!

---

ಪಂಡಿತನೆಹರುಗಳು ಯುರೋಪಿನಿಂದ ಮರಳಿ ಬಂದವರು ಅಲ್ಲಿಯ ಒಂದೊಂದೇ ಕತೆ ಹೇಳುತ್ತಿದ್ದಾರೆ.

೦ ೦ ೦

'ಇಂಗ್ಲೆಂಡಿನಲ್ಲಿ ಒಬ್ಬನಿಗೆ ತಿಂಗಳಿಗೈವತ್ತು ರೂಪಾಯಿಗಳಂತೆ ೨೦ ಲಕ್ಷ ನಿರುದ್ಯೋಗಿಗಳಿಗೆ ಸರಕಾರವು ಹಣ ಕೊಡುತ್ತಿದೆ; ನೋಡಿ ನಮ್ಮ ಹಿಂದುಸ್ಥಾನದ ಪಾಡು!' ಎನ್ನುತ್ತಾರೆ ನೆಹರುಗಳು. ಎಂಥಾ ಮತ್ಸರ!

೦ ೦ ೦

೩೫ ಕೋಟಿ ಸಂಖ್ಯೆಯಿರುವ ನಮ್ಮ ದೇಶದಲ್ಲಿ ೫೦ ರೂ. ಸಂಬಳ ಪಡೆಯುವ ನೌಕರರು ೨೦ ಲಕ್ಷ ದೊರೆತಾರೆ? ಕಷ್ಟ!

೦ ೦ ೦

ಇಂಗ್ಲೆಂಡಿನ ಕ್ರಮದಲ್ಲೇ ವಿಚಾರಿಸುವ! ೫೦ ರೂ. ಪಡೆಯುವವರು ನಿರುದ್ಯೋಗಿಗಳೆಂದಾಯಿತು. ಇಂಗ್ಲೆಂಡಿನಲ್ಲಿದ್ದಂತೆ ನಮ್ಮಲ್ಲಿ ಅಂತಹ ೨೦ ಲಕ್ಷ ನಿರುದ್ಯೋಗಿಗಳಿಲ್ಲವೆಂದಾಯಿತು. ನಮ್ಮಲ್ಲಿ ನಿರುದ್ಯೋಗಿಗಳು ಕಡಿಮೆಯೆಂದು ಹಿಗ್ಗುವದಕ್ಕೇನಡ್ಡಿ?

---

ಹಿಟ್ಲರನನ್ನು 'ದೇವಪುತ್ರ'ನೆಂದು ಕರೆಯುವದಿಲ್ಲವೇಕೆ? ಯೆಹೂದಿಯರನ್ನು ಓಡಿಸ ಹತ್ತಿದ ಮೇಲಾದರೂ ಹಾಗೆ ಕರೆಯಬಹುದಿತ್ತಲ್ಲ!

೦ ೦ ೦

ಯೆಹೂದಿಯರು ದೇವರೊಡನೆ ಬೇಡಿ ಕೊಂಡಿದ್ದ ಶಿಕ್ಷೆಯಿದು. ಹಿಟ್ಲರನದನ್ನು ಕೊಡುತ್ತಿದ್ದಾನೆ. ದೇವರ ಕೆಲಸಮಾಡಬೇಕಾದರೆ ದೇವಪುತ್ರನೇ ಆಗಬೇಕಲ್ಲವೆ?

೦ ೦ ೦

ಆ ದಿನ ಯೇಸುಸ್ವಾಮಿಯ ವಿಚಾರಣೆ ಮಾಡಿದ ಪಿಲಾತ ಹೇಳಿದ "ನನಗೆ ಇವನಲ್ಲೇನೂ ತಪ್ಪು ಕಾಣುವದಿಲ್ಲ." ಈ ಯೆಹೂದಿಯರು ಅಷ್ಟಕ್ಕೆ ಬಿಟ್ಟರೆ?

೦ ೦ ೦

'ಇವನು ಅಪರಾಧಿಯಲ್ಲವಾದರೆ ಆ ಪಾಪದ ಫಲವು ನಮ್ಮನ್ನೂ ನಮ್ಮ ಸಂತಾನವನ್ನೂ ಬಾಧಿಸಲಿ' ಎಂದು ನ್ಯಾಯಾಧೀಶನಿದಿರು ದೇವರನ್ನು ಕೇಳಿಕೊಂಡಿದ್ದರು.

೦ ೦ ೦

ಯೆಹೂದಿಯರು ಒಂದೋ ಆ ಅಪರಾಧವನ್ನು ಮಾಡಬಾರದಿತ್ತು- ಮಾಡಿಯೂ ದೇವರನ್ನು ಹಾಗೆ ಬೇಡಬಾರದಿತ್ತು. ಹೀಗೆ ಮಾಡಬಾರದ್ದನ್ನು ಮಾಡಿದವರು ಸಂತಾನ ಮಾಡುವ ಕಾರ್ಯವನ್ನಾದರೂ ಬಿಡಬೇಕಿತ್ತು!

೦ ೦ ೦

ಈ ನ್ಯಾಯವನ್ನು ಕೂಡಾ ಮುರಿದು, ಆ ದೇವದ್ರೋಹಿಗಳು ಸಂತಾನ ಮಾಡಿ ಹಾಕಬಹುದಂತೆ. ದೇವರು ಮಾತ್ರ ಹಿಟ್ಲರನಂತಹ ಮಗನನ್ನು ಹುಟ್ಟಿಸಬಾರದೆಂಬ ನಿರ್ಬಂಧವೆ?

---

ಇಂಡಿಯಾ ಸೆಕ್ರೆಟರಿ ಲೋಡ್ ಝೆಟ್ಲೆಂಡರಿಗೆ ಅಧಿಕ ಪ್ರಸಂಗ ಜಾಸ್ತಿ. ಅವರೊಂದು ಭಾಷಣದಲ್ಲಿ ಹಿಟ್ಲರನ ಯೆಹೂದೀಮರ್ದನದ ಕುರಿತು ಹೀಗೆ ಹೇಳಿದರು "ಮಾನುಷತ್ವಕ್ಕೆ ಧಕ್ಕೆ ಕೊಡುವ ಯಾವ ಸಂಗತಿಯೇ ಇರಲಿ- ಅದು ಅಂತರ್ರಾಷ್ಟ್ರೀಯ ಸಮಸ್ಯೆಯಾಗುತ್ತದೆ!"

೦ ೦ ೦

'ಆದ್ದರಿಂದಲೇ ಪೆಲೆಸ್ಟೈನ್ ಗೊಂದಲದ ಕುರಿತು ನಾವು ಅಭಿರುಚಿ ತೋರಿಸುತ್ತಿರುವೆವು' ಎನ್ನುತ್ತಾನೆ ಗೋಬೆಲ್ಸ್. ಬ್ರಿಟಿಷ್- ಜರ್ಮನಿಗಳೊಳಗೆ ಕೊಟ್ಟು ಪಡೆಯುವ ಧೋರಣೆಯುಂಟಯ್ಯ!

---

ಹಿಟ್ಲರನು ಹೊರದಬ್ಬಿದ ಯೆಹೂದಿಯರನ್ನು ಬ್ರಿಟಿಷರು ದಕ್ಷಿಣಾಫ್ರಿಕದ 'ಟಾಂಗನ್ಯಿಕಾ'ದಲ್ಲಿ ಕೂಡಿಸಿಡುತ್ತಿದ್ದಾರೆ. ಆಗಲಿ ಪಾಪ! ಮತ್ತೇನಾಗದಿದ್ದರೂ ಹಿಟ್ಲರನು ಬಿಸುಡಿದ್ದಕ್ಕೆ ಬೊಗಸೆಯೊಡ್ಡಲಿಕ್ಕಾದರೂ ಗೊತ್ತುಂಟಲ್ಲ!

೦ ೦ ೦

ಹಿಟ್ಲರನಿಗೆ ಬೇಕಾಗಿರುವ ಕೊಲೊನಿಯೊಡನೆ ಬೇಹವಾಗಿರುವ ಯೆಹೂದಿಯರನ್ನು ಮಿಶ್ರ ಮಾಡಿ ಇಟ್ಟರೆ, ಮತ್ತೂ ಆಗುಳಿಗೆಗೆ ಹಿಟ್ಲರ ಬಾಯಿ ಹಾಕುವನೋ ನೋಡೋಣ!

—ದೂ[illegible]

---

# ವಿಚಿತ್ರ ವಿಶ್ವ

**ಜಗತ್ತಿನ ವಿಚಿತ್ರ ಸೈನ್ಯ:**

ಜಗತ್ತಿನಲ್ಲಿ ಅತ್ಯಂತ ವಿಚಿತ್ರವಾದೊಂದು ಸೈನ್ಯವು ಅಮೇರಿಕದಲ್ಲಿದೆ. ಈ ಸೈನಿಕರು ಯಾವುದರಿಂದಲೂ ಗುಂಡೆಸೆಯುತ್ತಾರೆ. ಏನು ಮಾಡಲೂ ಸಿದ್ಧರಿದ್ದಾರೆ. ರಿಚಾರ್ಡ್ ಫೊನ್ ಓಪೆಲ್ ಎಂಬವರು ಆಸ್ಟ್ರಿಯದ ಮಾಜಿ ಸೈನಿಕರಾಗಿದ್ದರು. ನಿಜವಾದ ಸೈನಿಕನು ಅಮೇರಿಕಕ್ಕೆ ಬೇಡವಾದುದರಿಂದ ಈ ಮಹಾಶಯರು ತಮ್ಮ ಸ್ವಂತ ಸೈನ್ಯವೊಂದನ್ನು ರಚಿಸಿದರು. ಈ ಸೈನ್ಯವು ಯಾವ ಸರಕಾರದ ಅಧೀನವೂ ಇಲ್ಲ. ಚಲನಚಿತ್ರಗಳಿಗೆ ಬೇಕಾದರೆ ಇವರ ಸೈನ್ಯವು "ಹೋರಾಡಲು" ಸದಾ ಸಿದ್ಧವಾಗಿದೆ. ಹೊಲಿವುಡ್ಡಿನಲ್ಲಿ ಕೆಮರಗಳೆದುರು ಇವರ ಸೈನ್ಯವು ಬಹಳ ಪರಾಕ್ರಮದಿಂದ ಹೋರಾಡುತ್ತದೆ. ಎಂಥ ಕೋಲಿನ ತುಂಡನ್ನಾದರೂ ಕೋವಿಯಾಗಿ ಉಪಯೋಗಿಸುತ್ತದೆ. ಬಿಲ್ಲು ಬಾಣಗಳನ್ನು ಪಯೋಗಿಸುವುದರಲ್ಲಿ ಇವರು ಚತುರರು. ಯುದ್ಧದಲ್ಲಿ ಸೋಲುವುದಕ್ಕಾಗಿ ಈ ಸೈನ್ಯಕ್ಕೆ ತುಂಬಾ ಹಣ ಸಿಗುತ್ತದೆ. ವೊನ್ ಓಪೆಲರ ಸೈನಿಕರು ಇಷ್ಟೆಲ್ಲಾ "ಯುದ್ಧ"ಗಳಲ್ಲಿ ಹೋರಾಡಿದರೂ ಒಂದೇ ಒಂದು ಗಾಯವಾಗದೆ ಹಂದಿಗಳಂತೆ ಕೊಬ್ಬಿದ್ದಾರೆ.

○ ○ ○

**ಸಾಗರತಡಿಯನ್ನು ಅಗೆಯುತ್ತಾರೆ.**

ಐರಿಷ್ ತೀರದಿಂದ ಸುಮಾರು ೨೦೦ ಮೈಲು ದೂರದಲ್ಲಿ ಕೇಬಲ್‌ಗಳಿಗೆ ಹಾನಿಯಾದುದರಿಂದ ಅವುಗಳನ್ನು ಸಮುದ್ರದ ತಳವನ್ನಗೆದು ಹುಗಿಯುವ ವ್ಯವಸ್ಥೆಯನ್ನು ಮಾಡುತ್ತಿದ್ದಾರೆ. ಈ ಕೆಲಸವು ಪೂರ್ಣವಾಗಲು ಕನಿಷ್ಟಪಕ್ಷಕ್ಕೆ ಎರಡು ವರುಷಗಳು ಬೇಕಾಗಬಹುದೆಂದೂಹಿಸಲಾಗಿದೆ. ಬಹಳ ಗಟ್ಟಿಯಾಗಿರುವ ಬಂಡೆಗಳಿರುವುದರಿಂದ ಕೇಬಲ್‌ಗಳನ್ನು ಹುಗಿದಿಡುವ ಕೆಲಸವು ಬಹಳ ಪ್ರಯಾಸವಾಗಿದೆ.

○ ○ ○

**ಪುಸ್ತಕವೋದಿ ಜೈಲುಪಾಲಾದ**

ಅಮೇರಿಕದ ಚಾರ್ಲ್ಸ್ ಮನ್ನಾರೋ ಎಂಬವನಿಗೆ ಹಣಮಾಡಬೇಕೆಂದು ಮನಸ್ಸಾಯಿತು. ಅವನು ನಿಜವಾಗಿಯೂ ಕಳ್ಳನಾಣ್ಯಗಳನ್ನು ಮಾಡಲಾರಂಭಿಸಿದ. ಪೋಲೀಸರು ಹಿಡಿದು ವಿಚಾರಿಸಲಾಗಿ — "ನನ್ನ ಗೆಳೆಯನೊಬ್ಬನು ಸಾರ್ವಜನಿಕ ಪುಸ್ತಕಭಂಡಾರಕ್ಕೆ ಹೋಗಿ, ಅಲ್ಲಿ ಹಣಮಾಡುವ ಉಪಾಯವನ್ನೊಳಗೊಂಡಿರುವ ಪುಸ್ತಕವನ್ನು ಓದು" ಎಂದನು ಎಂದು ಹೇಳಿದ. ಆದರೆ ಪುಸ್ತಕದ ಹೆಸರನ್ನು ಮಾತ್ರ ಹೇಳಲಿಲ್ಲ. ಅಂತಹ ಪುಸ್ತಕವು ಲೈಬ್ರೆರಿಯಲ್ಲಿ ಇದೆಯೋ ಇಲ್ಲವೋ ಎಂದು ಅಧಿಕಾರಿಗಳು ಹುಡುಕುತ್ತಿದ್ದಾರೆ.

---

# ವಾರದ ಪಂಚಾಂಗ

## ಬಹುಧಾನ್ಯ ಸಂ|ರದ ಮಾರ್ಗಶಿರ ಶುಕ್ಲ ಕೃಷ್ಣಪಕ್ಷ ದಕ್ಷಿಣಾಯನಂ

**ವೃಶ್ಚಿಕ ೧೮ರಿಂದ ವೃಶ್ಚಿಕ ೨೪ರ ವರೆಗೆ. ಮಹಾನಕ್ಷತ್ರ ಜ್ಯೇಷ್ಠಾ. ಹೇಮಂತರ್ತುಃ ದಶಂಬರ ೧೯೩೮**

### ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 4 | ೧೨ | ರ೩೬ | ಅಶ್ವ೩೮\|\|\| | ವ೩೦ | ಬ೭ | ೨೮\|\|\| | ೨೦\|\|\| | ಧ೪ಗುರುಃ೪೫ಚಾಂದ್ರಮುಕ್ಕೋಟಿ† [†ದ್ವಾದಶೀಪ್ರದೋಷಃ ಮಾ.ಮೃ.ಅಶ್ವ |
| 5 | ೧೩ | ಚ೩೩\|\| | ಭ೩೭\|\|\| | ಪ೨೫ | ಕೌ೫ | ೨\|\| | ೨೬ | ಜ್ಯೈ೨ರ೫೦ ವೃಷಭೇಚ೫೨\| ಚೆ೪ಕು ೪೭ಸೋಮಪ್ರದೋಷಃ ಹ. ವ್ರತಂ |
| 6 | ೧೪ | ಕು೩೦\| | ಕೃ೩೬ | ಶಿ೧೯\| | ಗ೨\| | ೭ | ೩೦\| | ಬುಧವಕ್ರಾರಂಭಃ ದತ್ತ ಜಯಂತೀ |
| 7 | ೧೫ | ಬು೨೫\|\|\| | ರೋ೩೩\| | ಸಿ೧೩ | ಬ೨೫\|\|\| | ವಿ೧೪\| ವಿ೪೬\|\| | ೨೫\|\| | ○ ಪೂ. ಕೇಷಾಂಚಿದ್ದತ್ತಾತ್ರೇಯಜ. |
| 8 | ೧ | ಗು೨೦\|\|\| | ಮೃ೨೯\|\|\| | ಸಾ೬ ಉಪ ೨೫\|\| | ಕೌ೨೦\|\|\| | ೪೯\|\| | ೯\| | ಮಿಥುನೆಚ೧\|\| ಮಾ. ನಿ. ನಾರಾಯಣಃ |
| 9 | ೨ | ಶು೧೫\|\| | ಆರ್೨೬ | ಶು೫೧ | ಗ೧೫\|\| | ೫೪ | ೨\|\|\| | ಜ್ಯೈ೩ರ೭ ಪಶ್ಚಾದಸ್ತಂಬುಧಃ ಕರ್ಕಟೆಚ೮ಮೂ೧ವಬು೩೦ |
| 10 | ೩ | ಶ೯\|\|\| | ಪು೨೨\| | ಬ್ರಂ೪೩\| | ಭ೯\|\|\| | ೪೦\|\| | ೧೬\|\| | ಸಂಕಷ್ಟ೪ ಶನಿವಕ್ರತ್ಯಾಗಃ |

### ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 4 | ೧೨ | ರ೪೦\|\| | ಅಶ್ವ೪೨\| | ವರಿ೩೩ | ಬ೧೧\|\|\| | ೩೭\|\| | ೨೪\|\|\| | ವಿ೧ರಾಭ ೩ಕೆ೪೫ ಮುಕ್ಕೋಟಿ೧೨* [§ಬುಧಃಸೋಮಪ್ರದೋಷಃ |
| 5 | ೧೩ | ಚ೩೬ | ಭ೩೯\|\| | ಪ೭೬\|\| | ಕೌ೮\| | ೫\|\| | ೭೮ | ಜ್ಯೈ೨ರ೪೫ ವೃಷೆಚ೫೩\|\| ವಕ್ರೀ§ |
| 6 | ೧೪ | ಕು೩೦ | ಕೃ೩೫ | ಶಿ೧೮\|\|\| | ಗ೩ | ೨೩\|\| | ೨೯\|\| | ಚೆ೪ಕು೨ಮೂ೨ವಬು೮ ದತ್ತ ಜ. |
| 7 | ೧೫ | ಬು೨೨\|\|\| | ರೊ೩೦\| | ಸಿ೧೦\| | ಬ೨೨\|\|\| | ವಿ೧೧\|\| ವಿ೪೨ | ೭೨\|\| | ಮಿಥುನೆಚ೫೭ ○ ಪೂರ್ಣಮಾ |
| 8 | ೧ | ಗು೧೫ | ಮೃ೨೩\|\| | ಸಾ\|\|\|ಉಪ ೫೦\| | ಕೌ೧೫ | ೩೩\| | ೮೩\|\|\| ಅ ೫೪\|\|\| | ಧ೪ಗು೫ವಿ೭ವಶು೪೬ [*ಮಾ.ಮೃ. |
| 9 | ೨ | ಶು೬\|\|ಉಪ ೫೧\|\| | ಆರ್೧೭ | ಶು೪೧ | ಗ೬\|\| | ೪೩\|\|\| | ೦ | ಜ್ಯೈ೩ರ೨ಕರ್ಕಟೆಚ೫೭\|\| ಜ್ಞಾನ್ತಃಪರೆ ಮೂ೧ವಬು೪೬ ಮಾರ್ಗಿಶುಕ್ರಃ ಸಂ |
| 10 | ೪ | ಶ೫೦\| | ಪು೧೦\|\| | ಬ್ರ೩೧\| | ಬ೨೪\| | ೨೮\|\| | ೮೫\|೮೫೦ | ಕಷ್ಟ೪ |

# ಈ ವಾರದಲ್ಲಿ

# ನಿಮ್ಮ ಭವಿಷ್ಯವು ಹೇಗಿದೆ?

**ತಾ. ೪-೧೨-'೩೮ರಿಂದ**
**ತಾ. ೧೦-೧೨-'೩೮ರ ವರೆಗೆ.**

**ಮೇಷ:—**

※ ಗ್ರಹಸ್ಥಿತಿಯು ಬಹಳ ಕಠಿನಾವಸ್ಥೆಗೆ ಬಂದು ಮುಟ್ಟಿರುವುದು. ಮುಟ್ಟಿದ್ದು ನಷ್ಟ, ಹಿಡಿದದ್ದು ನಷ್ಟವೆಂಬಂತಾಗುವುದು. ಸರ್ವತೋಮುಖದಿಂದ ಧನ ವ್ಯಯವು ಆಗುವುದೇ ಹೊರತು ಬೇಕಾದ ಧನಾಗ ಮವು ಕಂಡುಬರುವುದಿಲ್ಲ. ಶರೀರದ ಆರೋಗ್ಯವು ಸಂಪೂರ್ಣ ಕೆಡುವುದು. ಅಕಸ್ಮಾತ್ ಪ್ರವಾಸವು ಒದಗಿ ಹೆಚ್ಚಿನ ಕಷ್ಟನಷ್ಟಗಳಿಗೆ ಈಡಾಗುವಿರಿ. ನಿಮ್ಮ ಪ್ರತಿಯೊಂದು ಕಾರ್ಯಗಳಿಗೂ ವಿಘ್ನವು ತಪ್ಪಿದ್ದಲ್ಲ. ಕೋರ್ಟು ವಗೈರೆ ಕಾರ್ಯಗಳು ವಿಪರೀತದಲ್ಲಿ ಪರ್ಯವ ಸಾನ ಹೊಂದುವವು. ಜಗಳಗಂಟಿಯಾದ ನಿಮ್ಮಾಕೆ ಯಿಂದಾಗಿ ಸಂಸಾರವು ಸಾಕುಸಾಕೆಂದು ತೋರಿ ಬಂದೀತು. ಇವೇಮೊದಲಾದ ಅನಿಷ್ಟಗಳಿಂದ ಶಾರೀ ರಕ, ಮಾನಸಿಕ, ಸಾಂಸಾರಿಕ ಸುಖವಿರಹಿತರಾಗಿ ಅತ್ಯಂತ ಶೋಕಾಕುಲಿತರಾದ ನಿಮಗೆ ಜೀವಿತವೇ ಬಹಳ ಹೇಯವೆಂದು ಕಂಡುಬಂದೀತು. ತಾ 6, 7, 10 ಈ ದಿನಗಳಲ್ಲಂತೂ ಮಾನಹಾನಿ ಧನವ್ಯಯಗಳು ಹೆಚ್ಚು ವುದಲ್ಲದೆ ಆಪ್ತಜನರೊಡನೆ ಮನಸ್ತಾಪವುಂಟಾಗು ವುದು

**ವೃಷಭ:—**

ನಿಮ್ಮ ಅದೃಷ್ಟವು ನಿಮ್ಮ ಉದ್ಯೋಗವನ್ನವ ಲಂಬಿಸಿಕೊಂಡಿದೆ. ಯಾಕಂದರೆ, "ಆಲಸ್ಯಂ ಹಿ ಮನು ಷ್ಯಾಣಾಂ ಶರೀರಸ್ಥೋ ಮಹಾರಿಪುಃ" ಮನುಷ್ಯರಿಗೆ ಆಲಸ್ಯ (ಉದಾಸೀನ) ವೆಂಬುದು ಅವರವರ ಶರೀರಗತ ವಾಗಿರತಕ್ಕಂಥಾ ಅತ್ಯಂತ ದೊಡ್ಡ ಶತ್ರುವು. ಈ ಶತ್ರು ವನ್ನು ಜಯಿಸಿ ನೀವು ಕಾರ್ಯಾಸಕ್ತರಾದಲ್ಲಿ ಕ್ರಿಯೆಗೆ ತಕ್ಕ ಪ್ರತಿಫಲವನ್ನು ಪಡೆದೇ ತೀರುವಿರಿ. ಪೂರ್ವಾ ರಂಭಿತಗಳಾದ ಅನೇಕ ಕಾರ್ಯಗಳು ಕೊನೆಗಾಣು ವವು. ಶತ್ರುಗಳ ಪೀಡೆಯು ನಿಮಗೆ ಸೋಂಕಲಾರದು. ಪರಕೀಯ ಸ್ತ್ರೀಧನವು ಸಿಗುವ ಯೋಗವಿದೆ. ಇಷ್ಟೆಲ್ಲಾ ಇದ್ದರೇನು ಪ್ರಯೋಜನ? ನಿಮ್ಮ ಆರೋಗ್ಯವು ಸರಿ ಯಾಗಿಲ್ಲದೆ ಉದರರೋಗ ತಾಪಜ್ವರಾದಿಗಳಿಗೆ ನಿಮ್ಮ ದೇಹವು ತವರ್ಮನೆಯಾಗಿರುವುದು. ಈಸಲುವಾಗಿ ಹೆಚ್ಚಿನಂಶ ಧನ ವ್ಯಯಿಸುವಿರಿ. ಆದರೂ ಸಾಲಮಾಡ ಬೇಕಾದ ಪ್ರಸಂಗ ಬರಲಾರದು. ಅಂತೂ ಆರೋಗ್ಯ ಭಾಗವೊಂದನ್ನುಳಿದು ಇತರ ಎಲ್ಲಾ ವಿಷಯಗಳೂ ತೃಪ್ತಿಕರಗಳಾಗಿವೆ. ತಾ 6. 7. 10 ಈ ದಿನಗಳಲ್ಲಿ ಧನಾಗಮ ಸ್ತ್ರೀಸುಖಗಳು ದೊರೆಯುವವು—

**ಮಿಥುನ:—**

※ ಈ ವಾರದಲ್ಲಿ ನಿಮ್ಮ ಮನಸ್ಸು ಸಿಂಹಘರ್ಜನೆ ಯನ್ನು ಕೇಳಿದ ಹುಲ್ಲೆಮರಿಯಂತೆ ಬಹಳ ಹೆದರಿ ಚಂಚಲವಾಗುವುದು. ಶತ್ರುಕ್ಷಯದಿಂದಾಗಿ ಒಂದು ಹೊಸಹುರುಪು ನಿಮ್ಮಲ್ಲಿ ಹುಟ್ಟಿಬರುವುದು. ಆರೋಗ್ಯದ ಮಟ್ಟಿಗೆ ಅಷ್ಟೊಂದು ಚಿಂತಿಸಬೇಕಾದ ಆವಶ್ಯಕತೆ ಯಿಲ್ಲವು. ಕಾರಣ, ಜಾಗರೂಕರಾಗಿದ್ದು ಮಿತಾಹಾರಿ ಗಳಾಗಿದ್ದರೆ ರೋಗದಬಲೆಗೆ ಸಿಲುಕಲಾರಿರಿ. ಪುತ್ರ ವಿಷಯಕವಾಗಿ ಹೆಚ್ಚಾಗಿ ಶೋಕಿಸುವಿರಿ. ಬಂಧುಗಳು ಮತ್ತು ಮಿತ್ರರ ಭೇಟಿ ಸಮಾರಂಭಗಳು ಆಗುವವು. ಖರ್ಚಿನ ಭಾಗವು ಮಾತ್ರ ಬಹಳ ಮುಂದರಿದಿದೆ. ಆಯ ಕ್ಕಿಂತ ದ್ವಿಗುಣಿತವಾಗಿ ವ್ಯಯವಾಗುವುದು. ಉದ್ಯೋಗಿ ಜನರಿಗೆ ಅವರವರ ಅಧಿಕಾರಿವರ್ಗದಿಂದ ಅನಿಷ್ಟಗಳು ಸಂಭವಿಸುವವು. ಜನರೊಡನೆ ಕಲಹವು ಹೆಚ್ಚುವುದ ರಿಂದ ಮನೋರೋಗವು ಅಧಿಕವಾಗುವುದು. ತಾ 6, 7. ಮತ್ತು 10ರಲ್ಲಿ ಆರೋಗ್ಯಕ್ಕೂ, ಧನಮಾನಗಳಿಗೂ, ಕಾರ್ಯಗಳಿಗೂ ಹೆಚ್ಚಿನ ವಿಘ್ನಗಳು ಬರುವವು—

**ಕರ್ಕಾಟಕ:—**

※ "ಧರ್ಮಸ್ಥಾನಗತೇ ಮಂದೇ ಧರ್ಮನಾಶೋ ಭವಿಷ್ಯತಿ" ಎಂಬ ವಾಕ್ಯಾನುಸಾರವಾಗಿ ನಿಮ್ಮ ರಾಶಿಗೆ ಧರ್ಮಸ್ಥಾನವಾದ ಮೀನರಾಶಿಯಲ್ಲಿ ಶನೈಶ್ಚರನಿರುವು ದರಿಂದ ಆತನು ಮೀನರಾಶಿ ಪ್ರವೇಶಿಸಿದಂದಿನಿಂದ ದೇವರು ಬ್ರಾಹ್ಮಣರು, ಗುರುಹಿರಿಯರು, ಆಚಾರಾದಿ ಗಳಲ್ಲಿ ನೀವು ಬಹಳ ಔದಾಸೀನ್ಯವನ್ನು ತಳೆದಿರುವಿರಿ. ಇದು ನಿಮ್ಮ ಆಪ್ತೇಷ್ಟರಿಗೆ ಸರಿಬಾರದಿರುವುದರಿಂದ ನಿಮಗೂ ಅವರಿಗೂ ಕೆಲವೊಮ್ಮೆ ಮಾತಿಗೆಮಾತು

ಬೆಳೆದು ಕಲಹವಾಗಿ ಮನಸ್ತಾಪ ಹುಟ್ಟಬಹುದು. ಇದು ಥಕ್ಕನೆ ನಿವಾರಣೆಯಾಗುವಂತಿಲ್ಲ. ನಿಮ್ಮ ಪ್ರಕೃತಿಯು ಈ ವಾರದಲ್ಲಿ ಚೆನ್ನಾಗಿ ಉಳಿಯಲಾರದು. ಅಲ್ಪ ಜನರ ಸಂಸರ್ಗದಿಂದ ನಿಮ್ಮ ಗೌರವವು ಕೆಟ್ಟು ಹೋಗುವದಲ್ಲದೆ ಕೆಲವೊಂದು ಅನಿಷ್ಟಗಳೂ ಉಂಟಾಗುವವು. ವೈವಾಹಿಕ ಸುಖವು ಚೆನ್ನಾಗಿಹುದು. "ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ" ಎಂದಂತೆ ಕೆಲಸಕ್ಕೆ ತಕ್ಕ ಪ್ರತಿಫಲ ದೊರೆಯುವುದು. ಅಂತೂ ಖರ್ಚಿನಮಟ್ಟಿಗೆ ಬೇರೆಯವರ ಮುಖನೋಡಬೇಕಾದ ಆವಶ್ಯಕತೆಯಿಲ್ಲ. ತಾ 8. 9ರಲ್ಲಿ ಧನವ್ಯಯ, ವಿಷಯದಲ್ಲೂ ಆರೋಗ್ಯಭಾಗದಲ್ಲೂ ದೃಷ್ಟಿ ಚೆನ್ನಾಗಿರಲಿ—

**ಸಿಂಹ—**

* ನಿಮಗೀವಾರದಲ್ಲಿ ಇಷ್ಟಕ್ಕಿಂತಲೂ ಅನಿಷ್ಟಗಳೇ ಸ್ವಲ್ಪ ಹೆಚ್ಚಾಗಿ ಅನುಭವಕ್ಕೆ ಬರುವವು. ಗೃಹಕಲಹವು ವೃದ್ಧಿಹೊಂದಿ ಪತ್ನೀಪುತ್ರರಿಗೂ ನಿಮಗೂ ವಿಯೋಗವುಂಟಾಗುವುದು. ಸಂಸಾರದಿಂದ ವಿರಹಿತರಾದ ನೀವು ಬಹಳ ದೀನವೃತ್ತಿಯುಳ್ಳವರಾಗುವಿರಿ. ಅನೇಕಕಾರ್ಯಗಳಲ್ಲಿ ಪರಾಜಿತರಾಗುವಿರಿ. ಕೋರ್ಟು ಕಚೇರಿ ವಗೈರಗಳಲ್ಲಿನ ಖಟ್ಲೆಗಳು ನಿಮಗೆ ವಿಪರೀತವಾಗಿ ಪರ್ಯವಸಾನ ಹೊಂದುವವು. ನಿಮ್ಮ ಮನೋರಥಗಳೊಂದೂ ಕಾರ್ಯರೂಪಕ್ಕೆ ಬರಲಾರವು. ವಾತ ಸಂಬಂಧವಾದ ರೋಗದಿಂದ ಅಂಗಾಂಗಗಳಲ್ಲಿ ನೋವು ವಗೈರೆಗಳುಂಟಾಗುವವು. ಆದರೂ ನೀಚಜನರಿಂದಾಗಿ ನಿಮಗೆ ಧನಲಾಭವಾಗುವುದು. ಖರ್ಚುಮಾಡುವುದಕ್ಕಿಂತಲೂ ಹೆಚ್ಚಾಗಿ ನೀವು ಧನಸಂಪಾದಿಸುವುದರಿಂದ ಸಾಂಪತ್ತಿಕ ಸ್ಥಿತಿಯು ಬಹುಮಟ್ಟಿಗೆ ಸುಧಾರಿಸಿದೆ ಎನ್ನಬಹುದು. ತಾ 4. 5. ಮತ್ತು 10. ಈದಿನಗಳು ಪ್ರಶಸ್ತವಾಗಿಲ್ಲವು. ಆದಕಾರಣ ಈ ದಿನಗಳಲ್ಲಿ ರಾಜಕೀಯಭಯ, ಉದರರೋಗಾದ್ಯನಿಷ್ಟಗಳು ತಲೆದೋರುವವು—

**ಕನ್ಯಾ:—**

* ಸೂರ್ಯನ ಹೊರತು ಇತರ ಸಮಸ್ತಗ್ರಹರೂ ನಿಮಗೆ ಅನಿಷ್ಟಕಾರಕರಾಗಿರುವುದರಿಂದ ನೀವು ಈ ವಾರವನ್ನು ಬಹಳ ಕಷ್ಟದಲ್ಲಿ ಕಳೆಯಬೇಕಾದ ಪ್ರಸಂಗ ಬಂದೊದಗಿದೆಯೆಂದು ನಿಶ್ಚಯವಾಗಿ ಹೇಳಬಹುದು. ಶತ್ರುಗಳ ಪ್ರತಿಕ್ರಿಯೆಯಿಂದಾಗಿ ನಿಮ್ಮ ಹಣವೆಲ್ಲವೂ ವ್ಯಯವಾಗಿಹೋಗುವುದು. ಸಾರ್ವಜನಿಕ ಕಾರ್ಯದಲ್ಲಿ ಮುಂದಾಳಾಗಿ ಹೋಗುವುದರಿಂದ ರಾಜಕೀಯ ಅಪರಾಧಿಯಾಗಿ ಗಣಿಸಲ್ಪಡುವ ಸಂಭವವಿದೆ. ವಿರೋಧಿಗಳ ಅಪಕೃತಿಗಳೂ ಸ್ತ್ರೀಯರಿಂದ ಅನಿಷ್ಟಗಳೂ ಹೆಚ್ಚುವುದರಿಂದ ಮನೋವ್ಯಥೆಯೆಂಬ ರೋಗವು ನಿಮ್ಮನ್ನು ಅಂಟಿಕೊಳ್ಳುವುದು. ಇದರಿಂದ ನಿಮಗೆ ನಿದ್ರಾಹಾರಗಳು ಕಾಲಕ್ಕೆ ಸರಿಯಾಗಿ ದೊರಕಲೊಲ್ಲವು. ಅವುಗಳ ಪರಿಣಾಮವಾಗಿ ಪಿತ್ಥಪ್ರಕೋಪವುಹೆಚ್ಚಿ ತದ್ವಿಷಯಕವಾದ ರೋಗಗಳು ಶರೀರವನ್ನಾವರಿಸುವವು. ಆದರೂ ರವ್ಯನುಗ್ರಹದಿಂದ ಹಣದ ಅಡಚಣೆಯು ಬರಲೊಲ್ಲದು. ಶತ್ರುಗಳ ಪೀಡೆಯಿಂದ ಪಾರಾಗುವಿರಿ. ತಾ 4ರಿಂದ 7ರ ವರೆಗಿನ ದಿನಗಳು ಹೆಚ್ಚಿನ ಅನಿಷ್ಟದಾಯಕಗಳಾಗಿರುವವು—

**ತುಲಾ:—**

* ನಿಮ್ಮ ರಾಶಿಗೆ ಮಿಶ್ರಫಲದಾತೃಗಳಾದ ಗ್ರಹರು ಸಮಾನರಾಗಿದ್ದರೂ ಶುಭಫಲಗಳೇ ನಿಮಗೆ ಹೆಚ್ಚಾಗಿ ಕಾರ್ಯರೂಪದಲ್ಲಿ ಕಂಡುಬರುವುವು. ಅನಿಷ್ಟರಿಂದಾಗಿ ಮತಿಯು ಚಂಚಲವಾಗಿದ್ದು ಆತ್ಮವಿಶ್ವಾಸವಿಲ್ಲದಾದೀತು. ವೈರಿಗಳಿಗಾಗಿ ಬೇರಿ ನಿರುದ್ಯೋಗಿಗಳಾಗಿ ಕುಳಿತಿರಲೂ ಬಹುದು. ನೇತ್ರಶಿರೋರೋಗಗಳಿಂದಲೂ ಚರ್ಮರೋಗಗಳಿಂದಲೂ ಮನಸ್ಸಿಗೆನೆಮ್ಮದಿಸಿಗಲಾರದು. ಆದರೂ ಇತರ ಸುಸ್ಥಾನಗತ ಗ್ರಹರಿಂದಾಗಿ ದಾಸದಾಸೀ ಜನರಿಂದಲೂ ಪಶ್ವಾದಿಗಳಿಂದಲೂ ಧನಧಾನ್ಯಾದಿಗಳಿಂದಲೂ ಗೃಹವು ಪರಿಪೂರ್ಣವಾಗಿರುವುದು. ಶತ್ರುಗಳು ಇದಿರುಬರಲಾರರು. ಶರೀರದ ಆರೋಗ್ಯವು ಬಹುಮಟ್ಟಿಗೆ ಸುಧಾರಿಸುವುದು. ವಿವಾಹಿತರು ಮತ್ತು ಕಾಮಿಜನರು ಕಾಮೋಪಕರಣಗಳಾದ ಸುವಾಸಿತವಸ್ತುಗಳಿಂದಲೂ, ಮನೋಜ್ಞಗಳಾದ ಗಂಧಕುಸುಮಾಂಬರಗಳಿಂದಲೂ ಯುಕ್ತವಾದ ಶಯ್ಯಾಸುಖವನ್ನು ಸಂಪೂರ್ಣಹೊಂದಿ ವನಿತಾಧರೋಷ್ಠಾಮೃತಪಾನಾತಿರೇಕದಿಂದ ಮತ್ತರಾಗುವರು. ತಾ 4. 5. ಮತ್ತು 10 ಈ ದಿನಗಳು ಅತ್ಯುತ್ತಮವಿವೆ—

**ವೃಶ್ಚಿಕ:—**

* ನಿಮಗೀವಾರದಲ್ಲಿ ಕೆಲವಂಶ ಶುಭವಿಹುದು. ಸಂಸಾರದ ಬಗ್ಗಾಗಿ ನೀವು ಏನೂ ಚಿಂತಿಸಬೇಕಾಗಿಲ್ಲ. ನೀವು ಧನವಸ್ತ್ರಾದಿಗಳನ್ನು ಸಂಪಾದಿಸುವಿರಿ. ಆದರೆ

ಮಾಡುವುದೇನು. ದುಡಿಯುವ ಮುಂಚೆಯೇ ಖರ್ಚಿಗೂ ದಾರಿಮಾಡಿರುವಿರಿ. ಆದ್ದರಿಂದ ಇವುಗಳು ಹಸ್ತಸ್ಪರ್ಶಮಾತ್ರದಿಂದ ನಿಮಗೆ ತೃಪ್ತಿಯನ್ನೀಯುವವೇ ಹೊರತು ಬೇರೆಯಿಲ್ಲವು. ಆರೋಗ್ಯದ ಮಟ್ಟಿಗೆ ನೀವು ಬಹಳ ಜಾಗರೂಕರಾಗಿರತಕ್ಕದ್ದು. ನಿರೋಗಿಯಾಗಿದ್ದ ನಿಮ್ಮ ಶರೀರವು ಕ್ಷಣದಲ್ಲೇ ಅತೀವ ರೋಗಯುಕ್ತವಾದುದಾಗಿ ಕಂಡುಬಂದೀತು. ಸ್ತ್ರೀಯರೊಡನೆ ವ್ಯವಹಾರಮಾಡುವಾಗಲೂ ಕೂಡ ಬಹಳ ಯೋಚಿಸಿ ಮಾತನಾಡಿರಿ. ಒಮ್ಮೆಗೇ ಕಲಹವುಂಟಾದೀತು. ಆಯಾಸ, ನೇತ್ರೋದರ ರೋಗಗಳು ತುಂಬಾ ಪೀಡಿಸುವವು. ವನಿತಾಸುಖವು ಸ್ವಪ್ನದಲ್ಲೂ ದುರ್ಲಭವಾಗುವುದು. ಇವೇ ಮೊದಲಾದ ಅನರ್ಥಶತಗಳಿಂದ ಪೀಡಿತರಾದ ನಿಮಗೆ ವಾರದ ಅಂತ್ಯಾರ್ಧವು ಬಹಳ ಹಾನಿಕರವಾಗಿರುವುದು—

**ಧನು:—**

* ನಿಮ್ಮ ಏಕಾದಶದಲ್ಲಿ ಕುಜ ಶುಕ್ರರು ಬಲಿಷ್ಠರಾಗಿ ಕುಳಿತಿರುವುದರಿಂದ ನಿಮಗಾವ ಭಾಗದಲ್ಲೂ ಬೆದರಿಕೆಯೆಂಬುದೇ ಇಲ್ಲವು. ನಾನಾರೀತಿಯಿಂದ ನಿಮಗೆ ಧನಲಾಭವಾಗುವುದರಿಂದ ಬಹಳ ದಿನಗಳಿಂದ ಪೀಡಿಸುತ್ತಿದ್ದ ಆರ್ಥಿಕ ಅಡಚಣೆಯು ನಿರ್ನಾಮವಾಗುವುದು. ಸಕಲ ಕಾರ್ಯದಲ್ಲೂ ಜಯವು ನಿಮಗೆ ಕಟ್ಟಿಟ್ಟ ಗಂಟಾಗಿರುವುದು. ತಂಡದ ಮುಖಂಡರಾಗಿ ಜನರಿಂದ ಗೌರವಾದರಾದಿಗಳನ್ನು ಪಡೆಯುವಿರಿ. ಮಿತ್ರವೃಂದವು ಅಭಿವೃದ್ಧಿಯನ್ನೈದುವುದು. ಇಷ್ಟೆಲ್ಲಾ ಅನುಕೂಲ್ಯವಿದ್ದರೂ ಆ ಶನಿಮಹಾರಾಯನ ಕಾಟದಿಂದ ನಿಮ್ಮ ಮನಸ್ಸು ಸ್ಥಿರವಾಗಿ ನಿಲ್ಲಲಾರದು. ಮತ್ತು ಸದಾ ವಕ್ರವಾಗಿದ್ದು ಕುಮಾರ್ಗದಲ್ಲೇ ಮುಂದರಿಯುತ್ತಾ ಹೋಗುವುದು. ಇನ್ನು ನೀವು ನಾಲಿಗೆಯನ್ನು ಬಿಗಿಹಿಡಿಯುವುದೊಳ್ಳಿತು. ಯಾಕೆಂಬುವಿರಾ? ಇಲ್ಲದಲ್ಲಿ ಮಾತುಮಾತಿಗೆ ಕಲಹವಾಗಿ ವೃಥಾಧನವ್ಯಯಕ್ಕೆ ಕಾರಣವಾದೀತು. ಸದಾಚಾರ ಸಂಪನ್ನರಿಗೆ ಈ ದೋಷಗಳು ಹೆಚ್ಚಿಗೆ ಬಾಧಿಸಲಾರವು. ತಾ 6ರಿಂದ 9ರ ವರೆಗಿನ ದಿನಗಳು ಚೆನ್ನಾಗಿವೆ—

**ಮಕರ:—**

* "ಅಳಿದೂರಿಗೆ ಉಳಿದವನೇ ಗೌಡ" ನೆಂದಂತೆ ಇತರ ಎಲ್ಲಾ ರಾಶಿಯವರಿಗಿಂತಲೂ ನೀವೇ ಹೆಚ್ಚಿನ ಅದೃಷ್ಟಶಾಲಿಗಳಾಗಿರುವಿರಿ. ನಿಮ್ಮ ಅದೃಷ್ಟ ಕಳೆದ ವಾರದಿಂದ ಸ್ವಲ್ಪ ಹೀನಾವಸ್ಥೆಯನ್ನು ಹೊಂದಿದ್ದರೂ ಉಳಿದವರಿಗಿಂತ ನೀವೇ ಮೇಲಾಗಿರುವಿರಿ. ನೀವು ಕೈಕೊಂಡ ಕಾರ್ಯಗಳು ವ್ಯಾಪಾರಾದಿ ಉದ್ಯೋಗಗಳು ಇವುಗಳಲ್ಲಿ ಧನಲಾಭವು ನೀವೆಣಿಸಿದ್ದುದಕ್ಕಿಂತಲೂ ಅಧಿಕವಾಗಿ ಆಗುವುದು. ಕಾರ್ಯಕರ್ತೃಶಕ್ತಿಯು ಚೆನ್ನಾಗಿರುವುದರಿಂದ ಸಕಲ ಕಾರ್ಯಗಳಲ್ಲೂ ಜಯಶೀಲರಾಗುವಿರಿ. ಮಿತ್ರವರ್ಗವು ಸಕಲ ವಿಷಯಗಳಲ್ಲೂ ನಿಮ್ಮ ಬಲಗೈಯಂತಿರುವುದು. ಪುತ್ರ ಪತ್ನಿಯರಿಂದ ಕೂಡಿದ ನಿಮಗೆ ದಿನಗಳೆದುದು ತಿಳಿಯದೆ ಹೋದೀತು. ಆದರೂ ನೀವು ಎಷ್ಟೊಂದು ಮಿತಭಾಷಿಗಳಾಗಿದ್ದರೂ ಜನರೊಡನೆ ಕಲಹವಾಗುವುದು. ಪ್ರವಾಸಕ್ಕೆ ಈ ವಾರವು ಒಳಿತಲ್ಲವು. ವಾರಾದಿಯ ನಾಲ್ಕು ದಿನಗಳು ಚೆನ್ನಾಗಿಲ್ಲದಿರುವುದರಿಂದ ಜಾಗರೂಕರಾಗಿ ವರ್ತಿಸತಕ್ಕದ್ದು—

**ಕುಂಭ: —**

* ಇತ್ತಂಡದ ಗ್ರಹರೂ ಸಮಬಲರಾಗಿ ಸಮಾನರಾಗಿರುವುದರಿಂದ ನಿಮಗೆ ನಿಮ್ಮ ಪೂರ್ವಸ್ಥಿತಿಗೆ ವಿಶೇಷ ವ್ಯತ್ಯಾಸವೇನೂ ಬರಲಾರದು. ಧರ್ಮಕಾರ್ಯಗಳು ಕ್ರಮದಂತೆ ಜರಗುವವು. ಸಂಕಲ್ಪಿಸಿದ ಕಾರ್ಯಗಳು ಕಾರ್ಯರೂಪದಲ್ಲಿ ಬಂದು ಕೊನೆಮುಟ್ಟುವವು. ಸಂಸಾರಿಕ ಸ್ಥಿತಿಯು ಚೆನ್ನಾಗಿರುವುದು ದೂರದೇಶೀಯ ಮಿತ್ರರ ಭೆಟ್ಟಿಯಾಗಲಿ ಪತ್ರಗಳಾಗಲಿ ನಿಮಗೆ ಸಿಗುವುವು. ಸ್ತ್ರೀಸುಖಕ್ಕೆ ಕೊರತೆಯಿಲ್ಲವು. ಶರೀರ ಪ್ರಕೃತಿಯಮಟ್ಟಿಗೆ ಈ ವಾರವು ಬಹಳ ಕೆಟ್ಟದ್ದಿದೆ. ಖರ್ಚಿಗೆ ಸಾಕಷ್ಟು ಉತ್ಪತ್ತಿ ಇರೋಣದರಿಂದ ಧನ ಭಾಗದಲ್ಲಿ ಹೆಚ್ಚಿನಪೀಡು ಇಲ್ಲವು. ಅಚಾತುರ್ಯದಿಂದಲೂ ಹೆದರಿಕೆಯಿಂದಲೂ ಕೆಲವುಮಟ್ಟಿಗೆ ಹಣವು ವ್ಯಯವಾಗುವುದು. ತಾ 4. 5. ಮತ್ತು 10 ಈ ದಿನಗಳು ಹೆಚ್ಚಿನಂಶ ಉತ್ತಮಗಳಾಗಿವೆ—

**ಮೀನ:—**

* ನಿಮಗೀವಾರದಲ್ಲಿ ಶುಭಕ್ಕಿಂತ ಅಶುಭವು ದ್ವಿಗುಣವಾಗಿ ಪರಿಣಮಿಸುವದು. ಗೃಹೋಪಕರಣಗಳು ಧನಲಾಭವು ಇಷ್ಟದಂತೆ ಪೂರೈಸುವುವು. ಸಂಪದ್ಯುಕ್ತ ಸ್ತ್ರೀಯಳು ನಿಮ್ಮ ವಶಳಾಗುವಳು. ವನಿತಾಸುಖವು ಇಷ್ಟದಂತೆ ಸಿಗುವುದು. ಇತರ ಅನಿಷ್ಟ ಗ್ರಹರಿಂವಾಗಿ ದೇಹದಲ್ಲಿ ಗಾಯ ಹುಣ್ಣು ವಗೈರೆಗಳೂ, ಶತ್ರುಗಳಿಂದಾಗಿ ಮಾನಹಾನಿಯೂ ಧನವಿಷಯಕವಾದ ಕಲಹವೂ,

(೪೯ನೆ ಪುಟ ನೋಡಿರಿ)

# ಕೊಡಗಿನ ಕುಡಿಯರು
ಮತ್ತು
# ಅವರ ನಡೆನುಡಿಗಳು

ಬರಹಗಾರರು: ಶ್ರೀ. ತಿರುಮಲೇಶ, ಆಲಂಗಾರು.

ಹಿಂದಿನ ಸಂಚಿಕೆಯಲ್ಲಿ ಕುಡಿಯರು ಎಲ್ಲಿರುವರು, ಹೇಗೆ ಜೀವಿಸುತ್ತಿರುವರು, ಅವರ ಗುಣ ನಡತೆಗಳು ಹೇಗೆ ಎಂಬ ವಿಷಯವನ್ನು ಬರೆದಿರುವೆನು. ಅಲ್ಲದೆ ಅವರ ಹಬ್ಬದ ಸಮಯ ಹಾಡಿ ಕುಣಿವ ಪದವೊಂದನ್ನು ಸಂಗ್ರಹಿಸಿದ್ದೆನು.

**ಕೊಡಿಚಿ** ಎಂಬುದು ಒಂದು ದೇವತೆ ಎಂದು **ನಂಬಿಕೆ.** ಇವರು ಅದನ್ನು ಪ್ರಾರ್ಥಿಸುವ ಪದ ಹಿಂದಿನ ಸಂಚಿಕೆಯಲ್ಲಿ ನೀವೋದಿದಿರಿ: ಕೊಡಿಚಿ ಪ್ರತ್ಯಕ್ಷವಾದಾಗ ಅಲ್ಲಿ ನೆರೆದ ಕುಡಿಯರು ಸಂತೋಷದಿಂದ ದುಡಿ ಹೊಡಿಯುತ್ತಾ ಕೆಳಗಿನ ಪದ್ಯವನ್ನು ಬಲು ಸೊಗಸಾಗಿ ಹಾಡುತ್ತಾ ಕುಣಿದಾಡುವರು. ಆ ಕುಣಿದಾಟವು ನೋಟಕರಿಗೆ ಬಲು ರಮ್ಯವಾಗಿ ಕಾಣುವುದು. ಆಗಿನ ಅವರ ಉತ್ಸಾಹದ ಕುಣಿತ, ಅದರೊಂದಿಗೆ ಒಂದೇ ತೆರನಾದ ಅವರ ಆ ಹಾಡು, ಅದರ ಜೊತೆಗೆ ಮಿಲನವಾಗುವ ಆ ದುಡಿಯ ಹೊಡೆತ ಇವೆಲ್ಲವೂ ಬಲು ಸೊಗಸು. ಆಗಿವರನ್ನು ಕಂಡರೆ ಇವರಿಗೆ ಈ ಲೋಕದ ನೆನಪೇ ಇಲ್ಲ ಎಂದು ತೋರುವುದು.

ಹೀಗೆ ಎಲ್ಲಗೂ ಸೇರಿ ಕೊಡಿಚಿ ಪದವನ್ನು ಹಾಡಿ ದುಡಿಬಾರಿಸಿ ಒಂದರೆಕ್ಷಣ ಎಲ್ಲರೂ ಮೌನವಾಗಿ ನಿಲ್ಲುವರು. ಆಗ ಕೊಡಿಚಿ ಪ್ರತ್ಯಕ್ಷವಾಗುವಳು. ಆಗ ಎಲ್ಲರೂ ಒಂದೇ ಉಸುರಿಗೆ ತಮ್ಮ ದುಡಿಯನ್ನು ಬಾರಿಸುತ್ತ ಹಾಡು ಹೇಳುತ್ತ ಕುಣಿದಾಡುವರು. ಆ ಪದವು ಈ ಕೆಳಗಿನಂತಿರುವುದು.

**'ಕೊಡಿಚಿಯ ಪ್ರತ್ಯಕ್ಷ'**

ನಿನೆಲ್ಲಿಂಜಿ ಬಂದ ಮಾಯತ್ ಸೂಳೆ?
ಮಾಯತ್ ಸೂಳೆರ ಮಮ್ಮಾಯ ತಾಟ್
ನೀನೆಲ್ಲಿಂಜಿ ಬಂದ ಮಾಯತ್ ದೇವಿ?
ಮಾಯತ್ ದೇವಿರ ಮಮ್ಮಾಯ ತಾಟ್!
ಏಳ್‌ತರಾ ಟೊಮ್ಮ ಆಡೊಮ್ಮ ಸೂಳೆ
ಬೊಳ್ಳಿ ತಾಳ ಕೊಟ್ಟಿ ತಾಡೊಮ್ಮ ಸೂಳೆ
ಏಳ್‌ತರಾ ಟೊಮ್ಮ ಆಡೊಮ್ಮ ದೇವಿ
ಬೊಳ್ಳಿತಾಳ ಕೊಟ್ಟಿ ತಾಡೊಮ್ಮ ದೇವಿ
ಬಾಯಕ್ಕೆ ಪೋಲೆ ಬವುಂಡಾಡೊ ಸೂಳೆ
ಕೊಯಕ್ಕೆ ಪೋಲೆ ಕೋಣಿಂಜಾಡೊ ಸೂಳೆ
ಕುಂಬಳ ಪೋಲೆ ಕುಣಿದಾಡೋ ಸೂಳೆ
ಚೋರಂಗೆ ಪೋಲೆ ಚುರ್‌ಂಡಡೋ ದೇವಿ
ಬಾಡೆ ಬಡಿತಿಂಗೊಂಡಾಡೊಮ್ಮೆ ಸೂಳೆ
ನೋರ್ ಕಲರೆಂಗೋಂಡಾಡೊಮ್ಮ ಸೂಳೆ
ಬಾಡೆ ಬಡಿಕಿಂಗೊಂಡಾಡೊಮ್ಮ ದೇವಿ
ನೋರ್ ಕಲಕಿಂಗೊಂಡಾಡೊಮ್ಮ ದೇವಿ
ಅತ್ತ ಕರಂದ್‌ಂಗೊಂಡಾಡೊಮ್ಮ ಸೂಳೆ
ಕೊಟ್ಟ್ ಕೆರತ್‌ಂಗೊಂಡಾಡೊಮ್ಮ ಸೂಳೆ
ಅತ್ತ ಕರಂದ್‌ಂಗೊಂಡಾಡೊಮ್ಮ ದೇವಿ
ಕೊಟ್ಟ್ ಕೆರತ್‌ಂಗೊಂಡಾಡೊಮ್ಮ ದೇವಿ
ಚಾಣಪೊರ್‌ತ್‌ಂಗೊಂಡಾಡೊಮ್ಮ ಸೂಳೆ
ನೀರ್ ಪೊರಾತ್‌ಂಗೊಂಡಾಡೊಮ್ಮ ಸೂಳೆ
ಬಾಣ ಪೊರ್‌ತ್‌ಂಗೊಂಡಾಡೊಮ್ಮ ದೇವಿ
ನೀರ್ ಪೊರ್‌ತ್‌ಂಗೊಂಡಾಡೊಮ್ಮ ದೇವಿ
ಬೋಗ ತಲೆಕಟ್ಟಿ ತಾಡೊಮ್ಮ ಸೂಳೆ
ನೆತ್ತಿ ಕುರಿಯಿಟ್ಟಿ ತಾಡೊಮ್ಮ ಸೂಳೆ
ಜೋಗ ತಲೆಕಟ್ಟಿ ತಾಡೊಮ್ಮ ದೇವಿ
ನೆತ್ತಿ ಕುರಿಯಿಟ್ಟಿತಾಡೊಮ್ಮ ದೇವಿ
ಕಣ್ಣ್ ತಪ್ಪ್‌ಟ್ಟಿ ತಾಡೊಮ್ಮ ಸೂಳೆ
ಕುಂದಂಗ್ ಕೊಳ್‌ಟ್ಟಿ ತಾಡೊಮ್ಮ ಸೂಳೆ
ಕಣ್ಣಾತ್ ಕಪ್ಪ್‌ಟ್ಟಿ ತಾಡೊಮ್ಮ ದೇವಿ

ತುಂದಂಗ್ ಕೂಳ್ಟ್ಟಿ ತಾಡೊಮ್ಮ ದೇವಿ
ಪೀಲಿ ನೆರಿಪ್ರೊಜ್ಜಿ ತಾಡೊಮ್ಮ ಸೂಳೆ
ಮಾಯತ್ ಸೂಳೇರ ಮಮ್ಮಾಯತಾಟ್
ಪೀಲಿನೇರಿ ಪ್ರೊಜ್ಜಿ ತಾಡೊಮ್ಮ ದೇವಿ
ಮಾಯತ್ ದೇವಿರ ಮಮ್ಮಾಯತಾಟ್
ಏಳ್ ತರಟೆಲ್ಲ ಆಡಿಟೋ ಸೂಳೆ
ಮಾಯತೆ ಬಂದ ನೀಮಯತೆ ಪೋಯ
ಏಳ್ ತರಾಟೆಲ್ಲ ಆಡಿಡೋದೇವಿ
ಮಾಯತೆ ಬಂದನೀ ಮಾಯತೆ ಪೋಯ

ಮೇಲಿನಪದವನ್ನು ಹಾಡಿಯಾದ ನಂತರ ಕೊಡಿಚಿಯು ಸಂತೋಷದಿಂದ ಅಲ್ಲಿ ನೆರೆದವರಿಗೆ ಅಭಯ ಹಸ್ತವನ್ನೀಯುವಳು. ಎಲ್ಲರೂ ಕೊಡಿಚಿಯ ಸುತ್ತು ನಿಂತು ಸಂತೋಷದಿಂದ ಅವಳ ದೇಹದ ವರ್ಣನೆ, ನಡತೆ, ಉಡುಪು, ಚರಿತ್ರೆ ಇತ್ಯಾದಿಗಳನ್ನು ಹಾಡುವರು. ಈ ಪದಗಳೆಲ್ಲವೂ ಒಂದಕ್ಕಿಂತ ಒಂದು ಚಲೋದಾಗಿವೆ. ಅವರು ಈ ಪದಗಳನ್ನು ಹಾಡುವಾಗ ನಮಗೆ ಆ ಭಾಷೆ ತಿಳಿಯದಿದ್ದರೂ ನಮ್ಮ ಮನಸ್ಸಿಗೆ ಅವರು ಹಾಡುವ ಪ್ರತಿಯೊಂದು ಪದದ ಅರ್ಥವು ಚೆನ್ನಾಗಿ ಹೊಳೆಯುವುದು. ಕಾರಣ ಅವರ ಆ ರೀತಿಯ ಹಾವಭಾವಗಳು. ಅವುಗಳಲ್ಲಿ ಈ ಕೆಳಗಿನ ಪದ್ಯವು ಕೊಡಿಚಿಯ ಶರೀರದ ವರ್ಣನೆಯಾಗಿದೆ.

**'ಕೊಡಿಚಿಯ ಶರೀರ'**

ಐಯ್ಯ ಕೊಡಿಚಿರ ಬೋಜ ಪರೆವೆ,
ಭೋಜ ಪರಂದ ಫಲನೆಚ್ಚ್ ಕುಂಡೊ?
ಅೖಯ್ಯ ಕೊಡಿಚಿರ ಕಾಬೆರ ನೋಟೊ
ಇಂಜಿಡೊ ಮಂಜಡೊ ಬೇರಿಂಜ ಪೋಲೆ
ಐಯ್ಯ ಕೊಡಿಚೀರ ಕಾಬೆರ ಬೋಜ
ಕಾಬೇರ ಪತ್ತಾಂಗ್ ಪೋದಿರ ಬೋಂಡು
ಐಯ್ಯ ಕೊಡಿಚೀರ ಕಾಲ ಕೊರವೆ
ಬಟ್ಟೆ ನಡಪಾಕ ಕಾಲಡ್ಡ ಪೋಪ
ಐಯ್ಯ ಕೊಡಿಚಿರ ಕಾಲ್‌ಡ ಬೋಜ
ಕುಟ್ಟ್ಕ ಮೊಣ್ಣೆ ಕುಲಂಗಿ ನಡಪ
ಐಯ್ಯ ಕೊಡಿಚಿರ ಮೂಳೆ ಚೆರಟೆ
ನಂದಿ ಮರತ್‌ಡ ಮೋರೆಗೆನಕೆ
ಐಯ್ಯ ಕೊಡಿಚೀರ ಮೂಳೆ ಚೆರಟೆ
ಮುಯ್ಯಾರಿ ಪೊಜ್ಜಿ ಪೊಯಿತ್ ಗೆನೆಕೆ
ಐಯ್ಯ ಕೊಡಿಚೀರ ತೊಡೆ ಕೊರವೆ?
ಮಂಡಾಳಿ ಪಾಂಚ್ ಕೊರಿಚಣ ಪೋಲೆ
ಐಯ್ಯ ಕೊಡಿಚೀರ ನಡು ಕೊರವೆ?
ಚಕ್ಕೆ ಪಣ್ಣ್ ಕಟ್ಟ್ ಕೇರ್‌ಗೆನಕೆ
ಐಯ್ಯ ಕೊಡಿಚೀರ ಬಳ್ಳಿ ಗಡವೊ
ಬಳ್ಳಿ ನಡುತೊತ್ತರೆ ಪಟ್ಟೆ ಬೊಂಡು
ಐಯ್ಯ ಕೊಡಿಚೀರ ಸೂಳೆ ಕೆಲವೊ
ಮೂಬಟ್ಟೆ ಕಾರಂಡ ಕೊಮ್ಮೆ ಗೆನಕೆ
ಅೖಯ್ಯ ಕೊಡಿಚೀರ ಪಾಕಮ್ಮೆ ಬೋಜ
ಪಾಲ್ ಕೊಳಂಬೊರ್ ಪಾಕಮ್ಮೆ ನೋಟೊ
ಅೖಯ್ಯ ಕೊಡಿಚಿರ ಮೊಲೆಕೊರವೆ
ಕಬ್ಬ ಮರತ್‌ಡ ಕಾಯಿಗೆನಕೆ
ಅೖಯ್ಯ ಕೊಡಿಚಿರ ಚೆಪ್ಪ್ ಮೊಲೆಯೊ
ಚೆಪ್ಪ ಮೊಲೆ ಕೊತ್ತ ಕೈಮಾತ್ ಬೋಂಡು
ಅೖಯ್ಯ ಕೊಡಿಚಿರ ಕೈಕೊರವೆ?
ಕೈಯರಂಡ್ಯೆ ಕೊಕ್ಕೆ ಬಾಯಕೆ ಪೋಲೆ
ಅೖಯ್ಯ ಕೊಡಿಚಿರ ಕುಟ್ಟೆಕಂಗ್ಯೆಯ್
ಕುಟ್ಟೆಕಂಗ್ಯೆ ಕೊತ್ತ ಕುಪ್ಪಿ ಬಳೆಯೊ
ಅೖಯ್ಯ ಕೊಡಿಚಿರ ಬೆನ್ನ್‌ಕೊರವೆ?
ಮೂಪನಿ ನೆಲ್ಲ್‌ಟ್ಟೊಣತಲು ಬೆನ್ನ್
ಅೖಯ್ಯ ಕೊಡಿಚಿರ ಬೆನ್ನ್‌ಡ ಬೋಜ
ಮೂಪಾನಿ ಮುತ್ತ್ ನೆರಕಲ್ಲು ಬೆನ್ನ್
ಅೖಯ್ಯ ಕೊಡಿಚಿರ ಕೋಳಿ ಕೊರವೆ?
ಚೆಂಬದುಡಿಕ್‌ಟ್ಟೆ ಕೇರ್ ಗೆನಕೆ
ಅೖಯ್ಯ ಕೊಡಿಚಿರ ಕೊಳಿ ಕೊರವೆ
ಅವೈಯ್ಯ ಕೊಡಿಚಿರ ಬಾಯಿ ಕೊರವೆ?
ಕಾಕೆ ಕರಿಬೆಚ್ಚ ಚಚ್ಚಿ ಗೆನಕೆ
ಅೖಯ್ಯ ಕೊಡಿಚಿರ ಬಾಯಿಡ ಬೋಜ
ನಂದಿಮ ಉರುಳಿ ಬಡಿಚಾಣ ಪೋಲೆ
ಐಯ್ಯ ಕೊಡಿಚಿರ ಪಲ್ ಕೊರವೆ?
ದ್‌ಟ್ಟೆಕ್ ಗುದ್ದಲಿ ಓಂಗ್‌ನ ಪೊಲೆ
ಅೖಯ್ಯ ಕೊಡಿಚಿರ ಪಲ್ಲ್‌ಡ್ ಬೋಜ
ಚೆತ್ತಿಲ್ ಮುತ್ತ್ ನೆರತ್ತನ ಪೊಲೆ
ಅೖಯ್ಯ ಕೊಡಿಚಿರ ವಕ ತೊರವೆ?
ನಾಯಿತ್ ನೀಕುಂಜಿ ಬೂಕಲ್ ಮೂಕ್
ಐಯ್ಯ ಕೊಡಿಚಿರ ಕೇಳವ್ವ ಮೂಕ್
ಕೇಳವ್ವ ಮೂಕ್‌ಕ್ ಮಾಕುತ್ತಿ ಬೊಂಡು
ಐಯ್ಯ ಕೊಡಿಚೀರ ಕಣ್ಣ್ ಕೊರವೆ?

ಊಕಾಡ್ ಚಕ್ಕೆಕ್ ಚೂಕಟ್ಟ್ ಪೊಲಿ
ಅಯ್ಯ ಕೊಡಿಚಿರ ಕಣ್ಣ್‌ಡ ಬೋಜ
ಕಾರಿ ಕೊರಂಬಾಡ್ ಕವ್ನೊರಿ ಪ್ರೋಲೆ
ಅಯ್ಯ ಕೊಡಿಚಿರ ಕೆವಿ ಕೊರವೆ?
ನಾಯಿಕ್ ನೆಯಿತಟ್ಟ್ ಕೆಟ್ಟನ್ ಪ್ರೊಲಿ
ಅಯ್ಯ ಕೊಡಿಚಿರ ಬಳ್ಳಿ ಕೆವಿಯೊ
ಬಳ್ಳಿ ಕೊನಿ ಕೊತ್ತ ಪ್ರೊನ್ನೋಲೆ ಬೋಂಡು
ಐಯ್ಯ ಕೊಡಿಚಿರ ನೆತ್ತಿ ಕೊರನೆ?
ಕಾಕೆ ಕೆಳಕಲು ತೂರಾಯಿ ನೆತ್ತಿ
ಅಯ್ಯ ಕೊಡಿಚಿರ ಉದ್ದಿಯ ನೆತ್ತಿ
ಉದ್ದಿಯ ನೆತ್ತಿಕ್ ಪೊಂಗೇರಿ ದೊಂಡು
ಅಯ್ಯ ಕೊಡಿಚಿರ ಪಂಜರಿ ಮಂಡೆ
ಪಂಜರಿ ಮಂಡೆ ಪರಿಚೆ ತಲಮಿ
ಅಯ್ಯ ಕೊಡಿಚಿರ ಜೋಗ ತಲೆಯೊ
ಜೋಗ ತಲೆ ಕೊತ್ತ ಪೊಂಗತ್ ಬೊಂಡು
ಮುಂದ್‌ತ್‌ಗ್ ಬಾರೊ ಮಂಡೆ ಕೊಡೆಯೊ
ಮಡೆ ಕೊಡೆಯಡು ಮೂಪಾನಿ ಮುತ್ತ್
ಏಳಲಿ ತಿಂಬಕ್ ಒಯಿಂಬದ್ ಪೂಇತ್
ಅಂಗಂಡರು ವಂಡನೆಯಿತಳ್ಳಿ ಪೂಇಜೆ
ಮುತ್ತ್ ಪೊರುಕುವ ಕೊಯಿಂಬದ್ ಮಕ್ಕ
ಊರ್‌ಕೇರಿ ಬಂದ ಓಯಿಂಬದ್ ಮಕ್ಕ
ಅಂಗಂಡರುವಂಡ ನೆಯಿಕಳ್ಳಿ ಪೂಇತ್
ಒಣಿ ಮರಿಯ ಪರಬುದ್ಧ ಬಪ್ಪ
ಊರಕೇರಿ ಬಂದ ಓಯಿಂಬದ್ ಮಕ್ಕ
ಒಣಿ ಮಡಕಲ್ ತಳಿಚಂಡೆ ಬಪ್ಪ.

ಮೇಲಿನ ಪದವನ್ನು ಹೇಳಿ ಆದ ನಂತರ ಎಲ್ಲರೂ ಒಮ್ಮೆ ಸುಮ್ಮನೆ ಕುಳಿತುಕೊಳ್ಳುವರು. ಆಗ ಕೊಡಿಚಿಯು ಎಲ್ಲರನ್ನೂ ಒಮ್ಮೆ ಸಂತೋಷದಿಂದ ನೋಡುವಳು. ಆ ಮೇಲೆ ಕೊಡಿಚಿಯ ನಡತೆಯು ವಿಷಯ ಹಾಡುವರು. ಆಗ ದುಟಿಯ ಪೆಟ್ಟು ಬದಲಾಗುವುದು ಅಲ್ಲದೆ ಒಂದು ನವಸ್ಫೂರ್ತಿ ಬರುವುದು. ಕೊಡಿಚಿಯ ನಡತೆಯ ಪದವು ಈ ಕೆಳಗಿನಂತಿರುವುದು–

'ಕೊಡಿಚಿಯ ನಡತೆ'

ಕಣ್ಣ್-ಕಯಿಂಜವಳ ಕಂಡ ಕರಿಯ
ಒಟ್ಟಿ ನಡಪಕ ಕಾಲಡ್ಡ ಪೋಪ
ದೇವಂಡ ದೇವಿನ ಕಂಡ ಕರಿಯು
ಒಟ್ಟಿ ನಡಪೋರ್ ಕಾಲ್‌ಡ ಬೋಜ

ಕಣ್ಣ್ ಕಯಿಂಜವಳ ಕಂಡ ಕರಿಯು
ಚಟ್ಟುವ ಕಾಲಿ ಚಡತಿ ನೊಡಕಿ;
ದೇವಂಡ ದೇವಿನ ಕಂಡ ಕರಿಯು
ಕುಟ್ಟ್ಯಕ ವೊಣ್ಣ್ ತುಲ್ಂಗಿ ನಡಪ
ಕಣ್ಣ್-ಕಯಿಂಜಿವಳ ಕಂಡ ಕರಿಯ
ತಾಗುತ್ತ ಉಚ್ಚಾಟಿ ತಾಲ್ ಮಿನಿಕಿ;
ದೇವಂಡ ದೇವಿನ ಕಂಡ ಕರಿಯು
ನಲ್ಲೆಣ್ಣೆ ಕೊಂಡಿತಿ ಕಾಲ್ ಮಿನಿಕಿ
ಕಣ್ಣ್–ಕಯಿಂಜವಳ ಕಂಡ ಕರಿಯು
ಬೆನ್ನಾಲ್ ಕೊಕ್ಕಲೆ ಒಮ್ಮಾಲು ತಪ್ಪ;
ದೇವಂಡ ದೇವಿನ ಕಂಡ ಕರಿಯು
ಬೆನ್ನಾಲ್ ಬಂಗೇರೆ ಒಮ್ಮಾಲು ತಪ್ಪ
ಕಣ್ಣ್- ಕಯಿಂಜವಳ ಕಂಡ ಕರಿಯು
ಮೂಕಳೆ ಚಾರೊಂಡು ಮೂಡ್ ಮಿನಿಕಿ,
ದೇವಂಡ ದೇವಿನ ಕಂಡ ಕರಿಯು
ಪೈಯ್ಯುಡ ನೊಯಂಡ್ ಮೂಡ್ ಮಿನಿಕಿ
ಕಣ್ಣ್- ಕಯಿಂಜವಳ್ ಕಂಡ ಕರಿಯ
ಕಣ್ಣಾಲ್ ಕಾಡಿಯ ಒಮ್ಮಾಲೂ ತಪ್ಪ!
ದೇಪಂಡ ದೇವಿನ ಕಂಡ ಕರಿಯು
ಕಣ್ಣ್‌ಕ್ ಕಪ್ಪಡ್ ದೇವಂಡ ದೇವಿ
ಕಣ್ಣ್- ಕಯಿಂಜವಳ ಕಂಡ ಕರಿಯ
ಅಣ್ಣಾಂಗ್ ಕೂಳ್‌ಟ್ಟ್ ತಣ್ಣಾಂಗೆನಸ!
ದೇವಂಡ ದೇವಿನ ಕಂಡ ಕರಿಯು
ಅಣ್ಣಾಂಗ್‌ಕೂಳ್‌ಟ್ಟ್ ಕಣ್ಣಾನ ನೋಟ
ಕಣ್ಣ್ ಕಯಿಂಜವಳ ಕಂಡ ಕರಿಯು
ಕೂಳ್‌ಟ್ಟ್ ಕುಪ್ಪ್ಡ ತೋತಿರಿ ಕಾರಿ;
ದೇವಂಡ ದೇವಿನ ಕಂಡ ಕರಿಯ
ಕೂಳ್‌ಟ್ಟ ಕುಪ್ಪ್‌ಡು ದೇವಂಡ ದೇವಿ

---

# "ವಿವಾಹವು ದೈವತಂತ್ರದ ಅಧೀನ; ಅದರಲ್ಲಿ ಮಾನವಯತ್ನ ಸಾಗಲಾರದು!"

(೧೪ನೆ ಪುಟದಿಂದ ಮುಂದರಿದುದು)

ನೊಬ್ಬನು ಮಲಗಿದ್ದ. ಚಟರ್ಜಿ ಸಮೀಪಕ್ಕೆ ಬಂದೊಡನೆ ಭಿಕ್ಷುಕನು ತನ್ನ ನಿದ್ರೆಯಲ್ಲಿ ಏನನ್ನೋ ಹೇಳುತ್ತಿರುವುದು ಕೇಳಿಸಿತು. ಅದೋ, ನದಿಯ ತೀರದಲ್ಲಿ ನೀರಿನೆಡೆಗೆ ನಡೆಯುತ್ತಿರುವ ಆ ವ್ಯಕ್ತಿಯಾರು? ಕೇಶರಾಶಿಯು ಗಾಳಿಗೆ ಸಿಕ್ಕಾಬಟ್ಟೆ ಹಾರುತ್ತಿರುವುದರಿಂದ ಯಾರೆಂದು ಕಾಣುವುದಿಲ್ಲ. ಅದಾರು? ಸಾಧುವೋ, ಹೆಂಗಸೋ? ಒಂಬಡಿ ಮುಂದೆಯಿಟ್ಟೊಡನೆಯೇ ಅದು ಬಿಳಿ ಸೀರೆಯುಟ್ಟ ಹೆಂಗಸೆಂದು ಅವನಿಗರಿಯಿತು. ಆಕೆ ಸ್ನಾನಮಾಡಲು ಬಂದಿರುವಳೇ? ಸ್ನಾನ, ಎಂಥ ಸ್ನಾನ? ಮಧ್ಯ ರಾತ್ರಿಯಲ್ಲಿಯೂ ಸ್ನಾನ ಮಾಡುತ್ತಾರೆಯೇ? ಅಯ್ಯೋ, ಆಕೆ ನದಿಗೆ ಹಾರಿಯೇ ಬಿಟ್ಟಳು. ಪ್ರಾಣದಾಶೆ ತೊರೆದು ಓಡಿದ ಚಟರ್ಜಿ. ಕೆಸರಿನಿಂದ ತುಂಬಿದ ನೀರಿಗೆ ಹಾರಿದ. ಆಕೆಯನ್ನು ಎಡಕ್ಕೆಳೆದು ತಂದಾಗ ತಾನೇನು ಮಾಡಿದೆನೆಂದು ಅವನಿಗರಿಯಿತು. ಆಕೆಯ ದೇಹವು ಬಹಳ ಭಾರವಾಗಿತ್ತು. ಎರಡೂ ಕೈಗಳನ್ನು ತಟ್ಟಿ ಚಟರ್ಜಿ ಸಹಾಯಕ್ಕಾಗಿ ಮೊರೆಯಿಟ್ಟ. ನಿದ್ರಿಸುತ್ತಿದ್ದ ಭಿಕ್ಷುಕ ಎದ್ದು ಓಡಿಬಂದು ಗುಣುಗುಟ್ಟ ತೊಡಗಿದ.

"ಏ, ಬೇಗ ಹೋಗಿ ಒಂದು ಟ್ಯಾಕ್ಸಿತರಲಿಕ್ಕೆ ಹೇಳುತ್ತೀಯಾ?" ಕೇಳಿದ ಚಟರ್ಜಿ. ಜೀರ್ಣವಾದ ಬಟ್ಟೆಯುಟ್ಟ ಭಿಕ್ಷುಕ ಜಗತ್ತಿನಲ್ಲಿ ಈ ತನಕ ಜೀವಿಸದವನಂತೆ, ಆ ಟ್ಯಾಕ್ಸಿಯೆಂದರೇನೆಂಬುದನ್ನು ತಿಳಿಯದವನಂತೆ ಕಣ್ಣು ಬಿಟ್ಟು ನೋಡುತ್ತಿದ್ದ. ಫಕ್ಕನೆ "ಆಯ್ತು ಸ್ವಾಮಿ, ಆಯ್ತು" ಎಂದು ಹೇಳಿ ಸಾಧ್ಯವಾದಷ್ಟು ಬೇಗನೆ ಓಡಿ ಹೋದ. ಪ್ರಾಯಶಃ ಅವನು ತುಂಬಾ ಬಂಗಿ ಸೇದಿರಬಹುದೆಂದು ಚಟರ್ಜಿ ಭಾವಿಸಿದ. ಅಷ್ಟರಲ್ಲಿಯೆ ಒಬ್ಬ ಮೋಟಾರು ಕಾರಿನಲ್ಲಿ ಬರುತ್ತಿದ್ದ. ಸಂತೋಷದಿಂದ ಚಟರ್ಜಿ ಕಾರನ್ನು ನಿಲ್ಲಿಸಿ "ಸ್ತ್ರೀ ಮುಳುಗಿದ್ದಾಳೆ. ಆಸ್ಪತ್ರೆಗೆ ಹೋಗಬೇಕಾಗಿದೆ, ದಯವಿಟ್ಟು ಸಹಾಯಮಾಡಿರಿ" ಎಂದ.

ooo ooo ooo

ಅರ್ಧ ದಾರಿಯಲ್ಲಿ ಚಟರ್ಜಿ ಸ್ತ್ರೀಯ ಮುಖ ನೋಡಿದ. ಆಶ್ಚರ್ಯದ ಚಿಹ್ನೆಯು ಅವನ ಮುಖಮಂಡಲದಲ್ಲಿ ಕಾಣಿಸಿತು.

"ಏನು ಸತ್ತಿರುವಳೇ" ಎಂದು ಕೇಳಿದ ಕಾರಿನ ಯಜಮಾನ. ಚಟರ್ಜಿಗೆ ಮಾತನಾಡಲಾಗಲಿಲ್ಲ. ಬಹಳ ಪ್ರಯಾಸದಿಂದ "ಇಲ್ಲ, ಸಾಯಲಿಲ್ಲ. ದಯವಿಟ್ಟು ಸ್ವಲ್ಪ ಬೇಗ ಹೋಗೋಣ" ಪ್ರಚಂಡ ವೇಗದಿಂದ ಕಾರು ಹೋಯಿತು. ಜಂಕ್ಷನಿನಲ್ಲಿದ್ದ ಪೋಲೀಸ್ ಸಾರ್ಜಂಟನಿಗೆ ಕಾರಿನ ವೇಗವನ್ನು ಕಂಡು ಸಿಟ್ಟುಬಂದಿರಬೇಕು. ಆಸ್ಪತ್ರೆಯಲ್ಲಿ ಎರಡೇ ನಿಮಿಷಗಳೊಳಗೆ ಅವನಿಗೆ ಆಶಾಜನಕವಾದೊಂದು ವಾರ್ತೆಯು ಸಿಕ್ಕಿತು. "ತರುಣಿಗೆ ಯಾವ ತೊಂದರೆಯೂ ಇಲ್ಲ. ಗಂಗಾನದಿಯ ಕೆಸರು ನೀರನ್ನು ಕುಡಿದಿದ್ದಾಳಷ್ಟೆ. ನೀವು ಬೇಗನೆ ಬಂದಿರಿ. ಅವಳು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಳೆ—ಹಾಗಾದರೆ.......,"

ಧೈರ್ಯದಿಂದ ಚಟರ್ಜಿ ಹೇಳಿದ. "ಇಲ್ಲಪ್ಪಾ, ಆಕೆಯು ನದಿಯ ನೀರಿನಲ್ಲಿ ಆಡುತ್ತಿದ್ದಾಗ ಕಾಲು ಜಾರಿಬಿದ್ದು ಬಿಟ್ಟಳಷ್ಟೆ. ನಾನೆಲ್ಲವನ್ನೂ ಕಂಡಿದ್ದೇನೆ" ಎಂದು ಪ್ರಚಂಡವಾಗಿ ಸುಳ್ಳಾಡಿದ.

ooo ooo ooo

ಸರಲೆಯು ವಿಶ್ರಾಂತಿಗಾಗಿ ಆಸ್ಪತ್ರೆಯ ಶುದ್ಧ ಬಿಳಿತಲೆಬಿಂದಿನ ಮೇಲೆ ತಲೆಯಿಟ್ಟು ತನ್ನ ವಿಧಿಯನ್ನು ದೂರುತ್ತಿದ್ದಳು. ವಿಧಿಯು ಅವಳ ಜೀವನವನ್ನು ಅಷ್ಟು ಕಷ್ಟಮಯವನ್ನಾಗಿ ಮಾಡಿತೇಕೆ? ಅವಳ ತಾರುಣ್ಯದಲ್ಲಿಯೇ ಇನಿಯನನ್ನು ಅದು ಸೆಳೆದೊಯ್ದಿದೆ. ಕ್ಷಯಪೀಡಿತ ಗಂಡನನ್ನು ಕೊಟ್ಟದ್ದು ಸಾಲದೆ ಕ್ಷಯಪೀಡಿತವಾದ ಮಗುವನ್ನೂ ಅವಳಿಗೆ ಕೊಟ್ಟಿದೆ. ಅವಳ ತಂದೆಯ ಆಸ್ತಿಯಲ್ಲಿ ಉಳಿದುದೆಂದರೆ ಒಂದು ಸಾವಿರ ರೂಪಾಯಿ ಮಾತ್ರ. ಅದನ್ನು ದುರದೃಷ್ಟವಶಾತ್ ಆಕೆಯು "ರಾಷ್ಟ್ರೀಯ ಬೇಂಕಿ"ನಲ್ಲಿಟ್ಟಿದ್ದಳು. ವಿಧಿಯು ಅದನ್ನು ಸೆಳೆದೊಯ್ಯಬೇಕೆ? ಕಷ್ಟಗಳು ಒಂದರ ಮೇಲೊಂದರಂತೆ ಬಡವರಿಗೆನೇ ಬರಬೇಕೆ? ಮೊದಲು ಆತ್ಮಹತ್ಯೆಯ ಮೂಲಕ ಇವೆಲ್ಲಾ ಕಷ್ಟಗಳಿಂದ ದೂರವಾಗುವುದೊಳ್ಳಿತೆಂದು ಆಕೆಗನ್ನಿಸಿತು. ಅದು ಹುಚ್ಚು ಕೇವಲ ಹುಚ್ಚು ಕಾರ್ಯ, ಭಾರತೀಯ ಜನನಿಗೆ ಹೇಳಿಸಿದುದಲ್ಲವೆಂದು ಆಕೆಗೆ ಸ್ಪಷ್ಟವಾಯಿತು. ಆಕೆ ಮಾಡಿದ ದುಷ್ಕಾರ್ಯಕ್ಕಾಗಿ ಅವಳಿಗೆ ನಾಚಿಕೆಯಾಯಿತು. ಆ ಕಾಲದಲ್ಲಿಯೇ ವಿಧಿಯು ಆಕೆಯನ್ನು ರಕ್ಷಿಸಿದ ಬಗೆಯಾದರೂ ಎಷ್ಟು ವಿಚಿತ್ರ? ಈ ದುಃಖಪೂರಿತ ಭಾವನೆ

ಗಳಿಂದ ಆಕೆಯು ಲಕ್ಷ್ಯವು ತನ್ನನ್ನು ಬದುಕಿಸಿದ ಆ ಪುರುಷನೆಡೆಗೆ ಹರಿಯಿತು.

೦೦ ೦೦ ೦೦

ಅವನು ಸಾಯಂಕಾಲ ಬರಬಹುದೆಂದು ದಾದಿಯು ಹೇಳಿದ್ದಳು. ಯಾಕೆ? ಅವನೇಕೆ ಸರಲೆಯನ್ನು ಕಾಣಲಾಶಿಸಬೇಕು? ಅವನಾರಾಗಿದ್ದರೂ ಆಕೆಯು ಯಾವ ಮುಖದಿಂದ ಅವನನ್ನು ನೋಡುವುದು? ಆಕೆಯ ಗುಣದ ಕುರಿತು ಅವನು ಸಹಾನುಭೂತಿಪರ ಭಾಷಣವನ್ನು ಕೊಡದಿರುವುದುಂಟೆ? ಅಯ್ಯೋ, ಆ ನಾಚಿಕೆಯನ್ನು ತಡೆಯುವುದಾದರೂ ಹೇಗೆ? ಅವನು ಬರುವ ಮೊದಲೇ ಆಸ್ಪತ್ರೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆ ಎಂದು ಆಕೆಗನ್ನಿಸಿತು. ತನ್ನನ್ನು ಬದುಕಿಸಿದ ಆ ಪುಣ್ಯಾತ್ಮನನ್ನು ಅಭಿವಂದಿಸದೆ ಹಾಗೆ ಓಡಿಹೋಗಬಾರದೆಂದು ಆಕೆಯ ಒಡಲ ನುಡಿಯೊಂದು ಹೇಳಿತು...

ಕೂಡಲೆ ಕಾಲಿನ ಸಪ್ಪಳವು ಕೇಳಿಸಿತು. ಆಕೆಯನ್ನು ಬದುಕಿಸಿದ ವ್ಯಕ್ತಿ. ನಾಲ್ಕೈದು ನಿಮಿಷ ಆಕೆ ಸ್ತಬ್ಧಳಾಗಿದ್ದಳು. ಆನಂದ, ಭಯ, ನಾಚಿಕೆ, ಗೊಂದಲ ಇವೆಲ್ಲಾ ಲಕ್ಷಣಗಳು ಆಕೆಯ ಮುಖದಲ್ಲಿ ಮೂಡಿದುವು. ಆಕೆಯು ನಡುಗಲಾರಂಭಿಸಿದಳು. ಆ ದೃಶ್ಯವು ಕನಸಾಗಿರಬಹುದೆಂದುಆಕೆಗನಿಸಿತು. ಆಯ್ಯೋ, ಕನಸಲ್ಲ, ನಿಜವಾದುದು! ಪೂರ್ಣ ನಿಜವಾದುದು!

ಚಟರ್ಜಿಗೆ ಆಕೆಯ ಪರಿಸ್ಥಿತಿಯನ್ನು ಕಂಡು ಮರುಕವಾಯಿತು. ‘‘ಸರಲಾ, ನೀನು ಆಸ್ಪತ್ರೆಯಿಂದ ಹೋಗಬಹುದೆಂದು ದಾದಿ ಹೇಳುತ್ತಾಳೆ. ನಿನ್ನನ್ನು ನಾನೆಲ್ಲಿಗೆ ಕರೆದೊಯ್ಯಬೇಕು? ನಿನ್ನ ವಿಳಾಸ ಕೊಡು ಸರಲ." ಆಕೆ ನಿಂತಲ್ಲಿಯೇ ಆಶ್ಚರ್ಯದಿಂದ ಮೌನವಾಗಿದ್ದಳು. ಉತ್ತರವೀಯುವುದು ಆಕೆಗೆ ಬಹಳ ಕಷ್ಟವಾಗಿ ಪರಿಣಮಿಸಿತು.

ಟ್ಯಾಕ್ಸಿಯಲ್ಲಿ ಕೂಡ ಅವನು ಜಾಗ್ರತೆಯಿಂದ ಆಕೆಯೊಡನೆ ಒಂದೆರಡು ಪ್ರಶ್ನೆಗಳನ್ನು ಮಾತ್ರ ಕೇಳಿದ್ದ. ಆಕೆಯ ಕೊಳಕು ಮನೆಯನ್ನು ಸೇರಿದೊಡನೆಯೇ ಚಟರ್ಜಿ ಸರಲೆಯ ಕತೆಯನ್ನು ಕೇಳಲಾರಂಭಿಸಿದ. ಇಡೀ ಕತೆಯನ್ನು ಕೇಳಿದ ಬಳಿಕ ಚಟರ್ಜಿಯು ಬೇಸರದಿಂದ ಸರಲೆಯೊಂದಿಗೆ ಕೇಳಿದ- ‘‘ಸರಲಾ, ರಾಷ್ಟ್ರೀಯ ಬೇಂಕಿನಲ್ಲಿ ನೀನು ಡಿಪಾಜಿಟ್ ಇಟ್ಟಿದ್ದಿಯೆಂದು ಹೇಳುತ್ತಿ. ಅದರ ನಂಬರು ನಿನಗೆ ಗೊತ್ತಿದೆಯೇ? ಡಿಪಾಜಿಟ್ ಮಾಡಿದ್ದು ಯಾವಾಗ?''

‘‘ಏಕೆ?" ಆಶ್ಚರ್ಯದಿಂದ ಕೇಳಿದಳು ಸರಲೆ. ನನಗೆ ಆ ಹಣವು ಹಿಂದೆ ಸಿಗಬಹುದೆ?''

‘‘ಸಿಗಬಹುದೋ ಇಲ್ಲವೋ ನನಗರಿಯದು, ಆದರೆ ನಾನು ನಿನ್ನೆ ರಾತ್ರಿ ಕಂಡಿರುವ ದೃಶ್ಯವು ನಿಜವೆಂದಾದರೆ ಪ್ರಾಯಶಃ ಸಿಗಲಿಕ್ಕೂ ಸಾಕು. ನೋಡೋಣ" ಚಟರ್ಜಿ ಡಿಪಾಜಿಟಿಗೆ ಸಂಬಂಧಪಟ್ಟ ಎಲ್ಲಾ ವಿವರಗಳನ್ನು ತನ್ನ ನೋಟ್ ಬೂಕಿನಲ್ಲಿ ಬರೆದುಕೊಂಡು ‘‘ಸರಲಾ, ನಾನೀಗ ಬಂದೆ" ಎಂದು ಹೇಳಿದ.

‘‘ನೀನೆಲ್ಲಿಗೆ ಹೋಗೋದು ಚಟರ್ಜೀ?"

‘‘ನಾನು ಹಿಂದೆ ಬಂದೊಡನೆ ಎಲ್ಲವನ್ನೂ ಹೇಳುತ್ತೇನೆ'' ಎಂದು ಹೇಳುತ್ತಾ ಚಟರ್ಜಿ ಹೋಗಿಯಾಯಿತು.

೦೦೦ ೦೦೦ ೦೦೦

ಚಟರ್ಜಿಯು ಮೊದಲೇ ಭಾವಿಸಿದ್ದಂತೆ ಮನೆಯ ಬಾಗಿಲು ಮುಚ್ಚಿತ್ತು. ಕದ ತಟ್ಟಿ ನಿರಾಶನಾಗಿ ಚಟರ್ಜಿಯು ಗೋಡೆ ಹಾರಿ ಒಳಗೆ ಹೋದಾಗ ಸುಮಾರು ಇಪ್ಪತ್ತು ವರುಷದ ಹುಡುಗಿಯೊಬ್ಬಳು ಕೋಪದಿಂದ ಕಿಡಿಕಿಡಿಯಾಗಿ ‘‘ನಿನಗೇನಿಲ್ಲಿ ಕೆಲಸ’’ವೆಂದಳು.

‘‘ನಿನ್ನ ಮನೆಗೆ ಬರುವವನೊಡನೆ ಸ್ವಲ್ಪ ಮಾತಾಡುವ ಕೆಲಸವಿದೆ. ನಾನು ಬಾಗಿಲು ತಟ್ಟಿದಾಗ ನೀನು ತೆರೆಯಲಿಲ್ಲ. ಅದಕ್ಕಾಗಿ ಗೋಡೆ ಹಾರಿದೆ'' ಎಂದು ಚಟರ್ಜಿಯು ಸಮಾಧಾನದಿಂದ ಹೇಳಿದ.

‘‘ನನ್ನ ಮನೆಯಲ್ಲಿ ಯಾರೂ ಇಲ್ಲ,ನೀನು ಬೇಗನೆ ಹೋಗು,ದಯವಿಟ್ಟು ಹೋಗು'' ಎಂದಳಾಕೆ.

‘‘ನಿನ್ನ ಮಾತನ್ನು ನಂಬದಿರಲು ನನಗಾಶೆಯಿಲ್ಲ ಮುದ್ದು. ಆದರೆ ಆ ಮಹಾಶಯನು ನನ್ನನ್ನಿಲ್ಲಿ ಕಾಣುವೆನೆಂದು ಹೇಳಿದ್ದರಿಂದ ಮಾತ್ರ ನಾನಿಲ್ಲಿಗೆ ಬಂದಿದ್ದೇನೆ. ಪ್ರಾಯಶಃ ನಿನಗಿದು ಮರೆತು ಹೋಗಿರಬಹುದು. ನಾನವನನ್ನು ನೋಡಿದೊಡನೆಯೇ ಹಿಂದೆ ಹೋಗುತ್ತೇನೆ."

‘‘ಅಬ್ಬಾ ನಿನ್ನ ಧೈರ್ಯವೆ'' ಎಂದಾ ಗಂಡುರಾಮೆ ಹೇಳುವಾಗಲೆ ಮಾಳಿಗೆಯಿಂದ ಕೆಳಗಿಳಿಯುತ್ತಿದ್ದ ಒಬ್ಬ ವ್ಯಕ್ತಿಯನ್ನು ಚಟರ್ಜಿಯು ನೋಡಿ ಒಂದು ಹೆಜ್ಜೆ ಮುಂದಿಟ್ಟೊಡನೆಯೇ ಆ ತರುಣಿಯವನನ್ನು ತಡೆದಳು. ಅವನೇ ಚಟರ್ಜಿಗೆ ಬೇಕಾಗಿದ್ದ ವ್ಯಕ್ತಿ. ತರುಣಿಯನ್ನು ಭರದಿಂದ ದೂಡಿ, ಮಾಳಿಗೆಯ ಮೆಟ್ಟಲು ಹತ್ತಿ ಕೋಣೆಯೊಳಗೆ ಪ್ರವೇಶಿಸಿದೊಡನೆಯೇ ಚಟರ್ಜಿಯು ನಡುಗುತ್ತಿದ್ದ ಬೇಂಕರನನ್ನು ಕಂಡ.

"ನೀನು ಯಾರು? ಈ ಮನೆಯೊಳಗೆ ಆಕ್ರಮ ಪ್ರವೇಶಮಾಡಲು ನಿನಗಾವ ಹಕ್ಕಿದೆ." ಯೆಂದು ಬೇಂಕರನು ಯಾರಿಗೂ ಕೇಳಿಸದಷ್ಟು ಸಮಾಧಾನದಿಂದ ಕೇಳಿದ.

"ನನಗೆ ನಿನ್ನೊಡನೆ ವಿಶೇಷ ಕೆಲಸವಿಲ್ಲ. ನೀನು ಸಮಾಧಾನದಿಂದ ಕೇಳುವುದಾದರೆ ಬೇಗನೇ ಹೇಳಿ ಬಿಡುತ್ತೇನೆ"

"ನನ್ನೊಡನೆ ನಿನಗೆ ಎಂಥ ಸಾವಿನ ಕೆಲಸ?" ಬೇಂಕರನು ಸಿಟ್ಟಿನಿಂದ ಕೇಳಿದ.

'ಮೊದಲನೆಯದಾಗಿ ರಾಷ್ಟ್ರೀಯ ಬೇಂಕನ್ನು ನಾಶಗೊಳಿಸಿ ಇಷ್ಟೊಂದು ಉಪಾಯದಿಂದ ಆನಂದಿಸುತ್ತಿರುವ ಮಹಾ ಕೇಡಿಯಾದ ನಿನ್ನನ್ನು ಅಭಿವಂದಿಸುವುದಕ್ಕಾಗಿ; ಎರಡನೆಯದೆಂದರೆ ನೀನು ಮಾಡಿಕೊಂಡಿರುವ ವೇಷ ಬದಲಾವಣೆಯು ಏನೇನೂ ಸಾಲದೆಂದು ಹೇಳುವುದಕ್ಕಾಗಿ. ಇವೆರಡು ಕೆಲಸಗಳು ಮಾತ್ರ, ನಿನ್ನ ಈಗಿನ ರೂಪವು ಪೋಲೀಸರನ್ನು ಮೋಸಗೊಳಿಸಿದರೂ ನನ್ನ ದೃಷ್ಟಿಯಿಂದ ನಿನಗೆ ತಪ್ಪಿಸಿಕೊಳ್ಳಲಾಗಲಿಲ್ಲ.'

ಬೇಂಕರನು ಚಟರ್ಜಿಯನ್ನು ನೋಡುತ್ತಿದ್ದಂತೆಯೇ ಅವನ ಬಲಗೈಯ್ಯು ಇಜಾರಿನ ಜೇಬಿನಿಂದ ಒಂದು ರಿವಾಲ್ವರನ್ನು ಹೊರತೆಗೆಯಿತು. 'ನೀನೀಗ ಈ ಮನೆಯಿಂದ ಹೊರನಡೆಯದಿದ್ದರೆ ಆರೆಕ್ಷಣದಲ್ಲಿಯೇ ನಿನ್ನ ಜೀವವುಳಿಯಲಾರದು" ಎಂದು ಹೇಳಿ ಬೇಂಕರನು ಪಿಸ್ತೂಲನ್ನು ಚಟರ್ಜಿಯ ಎದೆಗೆ ಹಿಡಿದನು.

ಚಟರ್ಜಿ ಹೆದರದೆ ಗಹಗಹಿಸಿ ನಕ್ಕು 'ನಾನು ನಿನ್ನ ಸ್ಥಾನದಲ್ಲಿದ್ದರೆ ಸರ್ವಥಾ ಈ ಬೆದರಿಕೆಯನ್ನು ಹಾಕುತ್ತಿಲ್ಲ. ಒಂದು ವೇಳೆ ನಿನ್ನ ರಿವಾಲ್ವರಿನಲ್ಲಿ ಗುಂಡಿದ್ದರೆ- ಇಲ್ಲವೆಂತ ಕಾಣುತ್ತದೆ-ನೀನು ನನಗೆ ಹೊಡೆದರೆ ಶಬ್ದವಾಗಿ ನೆರೆಹೊರೆಯ ಜನರು ಕೂಡಲೇ ಬರುವುದರಲ್ಲಿ ಸಂಶಯವಿಲ್ಲ. ಈಗ ನನಗೆ ಗುಂಡೆಸೆದರೆ ನೀನು ಎರಡು ಅಪಾದನೆಗೊಳಗಾಗುತ್ತಿ. ಒಂದನೆಯದಾಗಿ ನೀನು ಬೇಂಕಿಗೆ ಮೋಸಮಾಡಿದ್ದಿ. ಅದೂ ಸಾಲದೆ ಕೊಲೆಯ ಅಪಾದನೆಗೊಳಗಾಗುವುದು ನಿನಗೆ ಸರಿಯೆ?'

ಬೇಂಕರನು ರಿವಾಲ್ವರನ್ನು ಮೆಲ್ಲನೆ ತನ್ನ ಕಿಸೆಯೊಳಗೆ ಹಾಕಿ 'ನಿನಗೆ ನನ್ನಿಂದ ಏನಾಗ ಬೇಕಾಗಿದೆ" ಎಂದು ಕೇಳಿದ.

'ಸರಿ, ಈಗಲಾದರೆ ನೀನು ಒಬ್ಬ ಯೋಗ್ಯ ವ್ಯಕ್ತಿಯಂತೆ ವರ್ತಿಸುತ್ತಿ. ನಾನೊಬ್ಬ ಪತ್ತೇದಾರಿಯಲ್ಲ, ಆದುದರಿಂದ ನೀನು ನನಗೆ ಏನೇನೂ ಹೆದರಬೇಕಾಗಿಲ್ಲ. ಆದರೆ ಸಮೀಪದಲ್ಲಿ ಓರ್ವ ವಿಧವೆಯಿದ್ದಾಳೆ. ಆ ತರುಣಿ ವಿಧವೆಯೊಡನೆ ನನಗೆ ಸಂಬಂಧವಿದೆ. ನಿನ್ನ ಬೇಂಕಿನಲ್ಲಿ ಆಕೆ ಒಂದು ಸಾವಿರ ರೂಪಾಯಿಗಳನ್ನು ಡಿಪಾಸಿಟ್ ಇಟ್ಟಿದ್ದಾಳೆ. ನಿನಗೆ ಬೇಕಾಗಿದ್ದರೆ ಇಲ್ಲಿ ಅದರ ವಿವರಗಳಿವೆ'ಯೆಂದು ಚಟರ್ಜಿ ತನ್ನ ನೋಟುಬುಕ್ಕಿನ ಕಾಗದವನ್ನು ಹರಿದುಕೊಟ್ಟ. ಬೇಂಕರನು ಮೆಲ್ಲನೆ ಕಾಗದವನ್ನು ತೆಗೆದುಕೊಂಡು ನೋಡಿದಾಗ ಚಟರ್ಜಿ ಹೇಳಿದ. 'ನೀನು ಬಹಳ ಚತುರನಿರುವುದರಿಂದ ಪ್ರಾಯಶಃ ಕೆಲವು ಲಕ್ಷರೂಪಾಯಿಗಳನ್ನಾದರೂ ಇಲ್ಲಿಗೆ ತಂದಿರಬೇಕು. ಅದರಲ್ಲಿ ಸಾವಿರ ರೂಪಾಯಿಗಳನ್ನು ಕೊಟ್ಟರೆ ನಿನಗಾವ ತೊಂದರೆಯೂ ಆಗಲಿಕ್ಕಿಲ್ಲ. ಆ ಬಡ ವಿಧವೆಯ ಹಣವನ್ನು ಹಿಂದೆ ಕೊಡು. ನಿನ್ನಿಂದ ಮತ್ತೇನೂ ಬೇಕಾಗಿಲ್ಲ.

ಒಂದೆರಡು ನಿಮಿಷಗಳ ತನಕ ಬೇಂಕರನು ಮಾತಾಡಲಿಲ್ಲ. 'ನಾನೀಗ ನಿನಗೆ ಒಂದು ಸಾವಿರ ರೂಪಾಯಿ ಕೊಟ್ಟರೆ ನೀನು ಪೋಲೀಸಿನವರಿಗೆ ಹೇಳಲಿಕ್ಕಿಲ್ಲವೆಂದು ಹೇಗೆ ಹೇಳುವುದು' ಎಂದು ಬೇಂಕರನ ಪ್ರಶ್ನೆ.

'ಸರಿ, ಈ ವಿಚಾರದಲ್ಲಿ ನೀನು ನನ್ನನ್ನು ನಂಬಬಹುದು. ನಿನ್ನನ್ನು ಹಾಳುಮಾಡಬೇಕೆಂಬ ಮನಸ್ಸಿದ್ದರೆ ನಾನು ನಿನ್ನೆ ರಾತ್ರಿಯೇ ಪೋಲೀಸಿನವರನ್ನು ಕರೆದುತಂದು ನಿನ್ನನ್ನು ಹಿಡಿಸುತ್ತಿದ್ದೆ. ವೇಷ ಬದಲಾಯಿಸಿಕೊಂಡು ನೀನಿಲ್ಲಿಗೆ ನಿನ್ನೆ ರಾತ್ರೆ ಬರುತ್ತಿದ್ದುದ್ದನ್ನು ನಾನು ಕಂಡಿದ್ದೇನೆ.'

ಚಟರ್ಜಿಯು ಒಂದು ಸಾವಿರ ರೂಪಾಯಿಗಳನ್ನು ತನ್ನ ಜೇಬಿನಲ್ಲಿ ಹಾಕಿಕೊಂಡು ಹೋಗುವಾಗ "ಇಪಿ ಫಕೀರರನ್ನು ಮರೆಯಬೇಡ, ಅವರು ನಿನಗೆ ಯೋಗ್ಯಮಿತ್ರರಾಗಬಹುದು" ಎಂದು ಹೇಳಿ ಹೊರಟುಹೋದ.

ಂಂಂ ಂಂಂ ಂಂಂ

ಚಟರ್ಜಿಯು ಸರಲೆಗೆ ಎಲ್ಲಾ ವಿವರಗಳನ್ನು ಹೇಳಲಿಲ್ಲ. ಅವನ ಸಾಹಸಕಾರ್ಯ, ಬೇಂಕರನು ಅಡಗುವ ಸ್ಥಳ ಇವಾವ ರಹಸ್ಯವನ್ನೂ ಬಯಲುಮಾಡಲಿಲ್ಲ. ಹಣವನ್ನು ಹಿಂದೆ ಪಡೆದ ಕುರಿತು ಅವನು ಬೇರೆಯೇ ಒಂದು ಕತೆಯನ್ನು ಹೇಳಿದ. ಈ ಉಪಕಾರಕ್ಕಾಗಿ ಚಟರ್ಜಿಯನ್ನು ಹೇಗೆ ಅಭಿವಂದಿಸುವುದೆಂದು ಸರಲೆಗೆ ತಿಳಿಯಲಿಲ್ಲ. ಆಕೆಯ ಕಣ್ಣಿನಲ್ಲಿ ಆನಂದಬಾಷ್ಪವು

ಸುರಿಯುತ್ತಿತ್ತು. ಎಡೆಬಿಡದೆ ಅವಳು ಚಟರ್ಜಿಯನ್ನೇ ನೋಡತೊಡಗಿದಳು.

"ರಮಾ, ಗಂಗಾನದಿಯಲ್ಲಿ ಬಿದ್ದು ಸಾಯುತ್ತಿದ್ದ ನನ್ನನ್ನು ಬದುಕಿಸಿ, ಕಳೆದು ಹೋದ ರೂಪಾಯಿಗಳನ್ನು ಸಂಪಾದಿಸಿಕೊಟ್ಟ ನಿನಗೆ ನಾನೇನು ಮಾಡಲಿ" ಎಂದವಳು ಕಣ್ಣೀರು ಸುರಿಸುತ್ತಾ ಹೇಳಿದಳು.

'ಏನೂ ಮಾಡಬೇಕಾಗಿಲ್ಲ. ಸರಲಾ, ನಿನಗಾಗಿ ನಾನು ಏನನ್ನೂ ಮಾಡಬಲ್ಲೆನೆಂದು ನಿನಗಿನ್ನೂ ತಿಳಿದಿಲ್ಲವೆ? ನೀನು ಮತ್ತೇನೂ ಮಾಡವುದು ಬೇಡ- ನಿನ್ನ ವೈಧವ್ಯವನ್ನು ಮುರಿದೊಗೆಯುವುದಿದ್ದರೆ ನಿನ್ನ ರಮಾನಾಥ ಚಟರ್ಜಿಯನ್ನು ಮಾತ್ರ ಮರೆಯಬೇಡ. ಅವನು ಇನ್ನೂ ನಿನಗಾಗಿ ಹಾತೊರೆಯುತ್ತಿದ್ದಾನೆ." ಇಷ್ಟು ಹೇಳುವಾಗ ಚಟರ್ಜಿಯ ಕಣ್ಣಿನಲ್ಲಿಯೂ ನೀರು ಸುರಿಯಿತು.

"ರಮಾ," ಎನ್ನುವಾಗ ಸರಲೆಯ ಉಬ್ಬಿದ ಕೆನ್ನೆಗಳ ಮೇಲೆ ನಯನ ಮನೋಹರವಾದ ಕಣ್ಣುಗಳಿಂದ ನೀರು ಸುರಿಯುತ್ತಿತ್ತು. "ನನಗಾಗಿ ನೀನಿಷ್ಟರ ತನಕ ಮದುವೆಯಾಗದೆ ಹೇಗೆ ಕುಳಿತೆ?" ಈ ಪ್ರಶ್ನೆಯು ಚಟರ್ಜಿಗೆ ಅಮಿತಾನಂದವನ್ನುಂಟು ಮಾಡಿತು.

ಚಟರ್ಜಿಯು ಸರಲೆಯದಾಳಿಂಬದಾಕಾರದ! ಮುಖಮಂಡಲವನ್ನು ಹಿಡಿದು ಆಕೆಯ ಕಣ್ಣೀರುಮಯವಾದ ಮುಖದ ಮೇಲೆ ನೂರಾರು ಬಾರಿ ಮುತ್ತಿಟ್ಟನು. ಅವನ ಎರಡೂ ಕೈಗಳು ಆಕೆಯನ್ನಾಲಿಂಗಿಸಿದ್ದುವು. ಸರಲೆಯು ತನ್ನ ನಳಿತೋಳುಗಳನ್ನು ಆತನ ಕೊರಳಿಗೆ ಬಿಗಿದಿದ್ದಳು. ಸರಲೆಯ ಕೆನ್ನೆಯ ಮೇಲೆ ತನ್ನ ಮುಖವಿಟ್ಟು ಚಟರ್ಜಿಯು ಹೇಳಿದ. "ಮುದ್ದು, ಲೋಕದಲ್ಲಿ ಅನೇಕ ಪುರುಷರು ಒಬ್ಬ ಸ್ತ್ರೀಯನ್ನೇ ಪ್ರೇಮಿಸುತ್ತಾರೆ. ಅಂಥವರಲ್ಲಿ ನಾನೊಬ್ಬ".

---

# ಚುಂಬಿಸಿದರೆ ಸೆರೆಮನೆ ಗತಿ!

- **ಮಗುವನ್ನು ಮಾರಿದರೂ ಚುಂಬಿಸಬಾರದು!**
- **ಜಪಾನಿನ ವಿಚಿತ್ರ ಪದ್ಧತಿ!**

> ಜಪಾನಿನ ಚಲನಚಿತ್ರಗಳಲ್ಲಿ ರಾಜರನ್ನು ಮನುಷ್ಯರಂತೆ ಚಿತ್ರಿಸಬಾರದು. ಕಾರಣ - ಹಿರೋಹಿಟೋ ದೇವಸಂಭೂತನಂತೆ!
>
> ○
>
> ರಾತ್ರಿ ೮ ತಾಸಿನ ಬಳಿಕ ಸ್ತ್ರೀಯರು ಮನೆಯಿಂದ ಹೊರಗೆ ಬರಬಾರದು - ಬಂದರೆ ಸೆರೆಮನೆ!

ಜಪಾನ್! ವೈಚಿತ್ರ್ಯಗಳ ನೆಲೆವೀಡಿದು. ವಿವಿಧ ದೇಶಗಳಲ್ಲಿ ನಾನಾ ವಿಚಿತ್ರಗಳಿರುವಂತೆ ಜಪಾನಿನಲ್ಲಿಯೂ ಒಂದು ವಿಚಿತ್ರ ಪದ್ಧತಿಯಿದೆ. ರಾತ್ರಿ ಎಂಟು ತಾಸಿನ ಬಳಿಕ ಸ್ತ್ರೀಯರು ಸಾರ್ವಜನಿಕವಾಗಿ ಯಾರೊಡನೆಯೂ ಮಾತಾಡುವುದಿಲ್ಲ. ಅಂಗಡಿಗಳಲ್ಲಿ ಯಾರಿಗೂ ತಮ್ಮ ಕೈಯಲ್ಲಿ ಸಾಮಾನುಗಳನ್ನು ಕೊಡುವುದಿಲ್ಲ. ನಿಮಗೇನಾದರೂ ಬೇಕಾಗಿದ್ದರೆ ಹಣವನ್ನು ಒಂದು ಯಂತ್ರದೊಳಗೆ ಹಾಕಿ ಸಾಮಾನಿನ ಹೆಸರನ್ನು ಹೇಳಬೇಕು. ಕೂಡಲೇ ಬಂದೇ ಬರುತ್ತದೆ ನಿಮ್ಮ ಸಾಮಾನು. ಟೋಕಿಯೋ ನಗರದಲ್ಲಿ ಈಗಲೂ ಈ ಪದ್ಧತಿಯು ಜಾರಿಯಲ್ಲಿದೆ.

. . . . .

ಜಗತ್ತಿನ ಬಹುದೊಡ್ಡ ಪಟ್ಟಣಗಳಲ್ಲಿ ಮೂರನೆಯದಾದ ಟೋಕಿಯೋ ನಗರದಲ್ಲಿ, ಆರು ಮಿಲಿಯ ಜನರ ನಿವಾಸಸ್ಥಾನದಲ್ಲಿ ಈ ಪದ್ಧತಿಯು ಬಳಕೆಯಲ್ಲಿದೆಯೆಂದರೆ ನಿಮಗೆ ಆಶ್ಚರ್ಯವಾಗಬಹುದು. ಹನ್ನೊಂದು ತಾಸಿನೊಳಗೆ ಪ್ರತಿಯೊಬ್ಬರೂ ಮನೆಗಳೊಳಗಿರಬೇಕೆಂಬ ಕಟ್ಟಾಜ್ಞೆಯನ್ನು ಅಲ್ಲಿಯ ಸರಕಾರವು ಮಾಡಿರುತ್ತದೆ.

. . . . .

ಟೋಕಿಯೋದಲ್ಲಿ ಎಂಟು ನೃತ್ಯ ಸದನಗಳಿದ್ದರೂ, ಹನ್ನೊಂದು ತಾಸಿನೊಳಗೆ ಎಲ್ಲವೂ ಮುಗಿಯಬೇಕು. ಈ "ಪವಿತ್ರಕಾಲ"ದ ಬಳಿಕ ಯಾರಾದರೂ ಬೀದಿಗಳಲ್ಲಿ ಸಂಚರಿಸಿದರೆ ಅವರು ಅಪಾಯಕರ ವ್ಯಕ್ತಿಗಳೆಂದು ಅರ್ಥಮಾಡಿಕೊಳ್ಳುತ್ತಾರೆ. ಈ ವಿಚಿತ್ರ ನಿಯಮದಿಂದಾಗಿ ಯಾವನೂ ೧೧ ತಾಸಿನ ಬಳಿಕ ಜಪಾನಿನ ಬೀದಿಗಳಲ್ಲಿ ಅಲೆದಾಡುವುದಿಲ್ಲ. ಯಾವ ಸ್ತ್ರೀಯೂ ಆ ಕಾಲದ ಬಳಿಕ ಮನೆಯಿಂದ ಹೊರಗೆ ಕಾಲಿಡುವುದಿಲ್ಲ.

. . . . .

ನೀವು ಯಾರಾದರೊಬ್ಬ ಸ್ತ್ರೀಯೊಡನೆ ೮ ತಾಸಿನ ಬಳಿಕ ಬೀದಿಯಲ್ಲಿ ಹೋದರೆ ಆಕೆ ಮರುದಿನ ಸೆರೆಮನೆಯಲ್ಲಿರಬೇಕಾಗುತ್ತದೆ. ಟೋಕಿಯೋ ನಗರದಲ್ಲಿ ಸರಕಾರವು ೬೦೦ ಸ್ತ್ರೀಯರಿಗೆ ಲೈಸೆನ್ಸು ಕೊಟ್ಟು ಅವರು ಇತರರ ದೃಷ್ಟಿಯಲ್ಲಿ ತಮ್ಮ ಪಾವಿತ್ರ್ಯವನ್ನು ಳಿಸಿಕೊಳ್ಳಬೇಕೆಂಬ ನಿಯಮವನ್ನು ಮಾಡಿದೆ. ಅಧಿಕಾರಿಗಳು ಆಗಾಗ ಇವರ ಖಾಸಗಿ ಜೀವನದಲ್ಲಿ ಕೈಹಾಕುವುದುಂಟು.

. . . . .

ಟೋಕಿಯೋ ನಗರದ ಸಿನೆಮಗಳು ಕೂಡಾ ೧೧ ತಾಸಿನೊಳಗೆ ಮುಗಿಯುತ್ತವೆ. ಪ್ರೇಕ್ಷಕರು ಆ "ಪವಿತ್ರಕಾಲ"ದೊಳಗೆ ತಂತಮ್ಮ ಮನೆಗಳನ್ನು ಸೇರುವಂತೆ ಎಲ್ಲಾ ಸೌಕರ್ಯಗಳು ಒದಗಿಸಲ್ಪಡುತ್ತವೆ. ಜಪಾನಿನ ಚಲನಚಿತ್ರಗಳು ಬಹಳ ವಿಚಿತ್ರವಾಗಿವೆ ಚಿತ್ರ ತಯಾರಿಸುವವರು ಎಂಥ ಚಿತ್ರಗಳನ್ನೂ ತಯಾರಿಸಬಹುದು. ಆದರೆ ಅಲ್ಲಿಯ ಅಧಿಕಾರಿಗಳು ತಮ್ಮ ದೃಷ್ಟಿಯಲ್ಲಿ "ಅಶ್ಲೀಲ"ವಾಗಿರುವುದನ್ನು ನಿಷೇಧಿಸುತ್ತಾರೆ.

. . . . .

ಚಲನಚಿತ್ರಗಳಲ್ಲಿ ಢಕಾಯಿತಿ, ಕಳವು, ರೈಲ್ವೇ ಅಪಘಡ, ರಕ್ತಪಾತದ ದೃಶ್ಯ, ಪೋಲೀಸ್ ಅಧಿಕಾರಿಗಳಿಂದ ಕಳವು ಇವಾವುವೂ ಇರಬಾರದು. ಯುದ್ಧವನ್ನು ತುಚ್ಛೀಕರಿಸುವ ಯಾವ ವಿಚಾರವೂ ಚಿತ್ರದಲ್ಲಿರಬಾರದು. ಸೈನ್ಯದ ಮಹತ್ವವನ್ನು ಬಗೆಬಗೆಯಿಂದ ಬಣ್ಣಿಸುವ ಕೆಲವು ದೃಶ್ಯಗಳಾದರೂ ಒಳ್ಳೆ ಚಿತ್ರವೆನಿಸಲ್ಪಡುವುದರಲ್ಲಿ ಇರಬೇಕು. ರಾಜಮನೆತನದವರನ್ನು ಚಿತ್ರದಲ್ಲಿ "ಮಾನವ ಸಂಭೂತ"ರೆಂದು ಚಿತ್ರಿಸಬಾರದು. ಕಾರಣ—ಜಪಾನ್ ಚಕ್ರವರ್ತಿಯನ್ನು ದೇವಸಂಭೂತನೆಂದು ಅಲ್ಲಿಯವರು ಪೂಜಿಸುತ್ತಾರೆ. 'ಮ್ಯುಟಿನಿ

ಆನ್ ದಿ ಬೌಂಟಿ' ಎಂಬೊಂದು ನೌಕಾದಂಗೆಯ ಚಿತ್ರ ಕೂಡಾ ಅಲ್ಲಿ ನಿಷೇಧಿಸಲ್ಪಟ್ಟಿದೆ.

. . . . .

ಚಲನಚಿತ್ರಗಳನ್ನು ತಯಾರಿಸುವವರು ಪ್ರೇಮಪ್ರಸಂಗಗಳಿಗೆ ಸಂಬಂಧಪಟ್ಟ ಚಿತ್ರವನ್ನು ತಯಾರಿಸಬಹುದು. ಆದರೆ ಕಥಾನಾಯಕನು ನಾಯಕಿಯನ್ನು ಸರ್ವಥಾ ಮುದ್ದಿಡಬಾರದು. ಕಾಮಪ್ರಚೋದಕವಾದ ಅರೆನಗೆಯೊಂದಿದ್ದರೆ ನಿಷೇಧ ಸಮಿತಿಯ ಕತ್ತರಿಯು ಅದನ್ನು ಕತ್ತರಿಸಿಯೇ ಬಿಡುತ್ತದೆ- "ಮುತ್ತು ಅಥವಾ ಚುಂಬನ" ಎಂಬರ್ಥದ ಶಬ್ದಗಳನ್ನು ಯಾವಚಿತ್ರದಲ್ಲಿಯೂ ಉಪಯೋಗಿಸಬಾರದು.

. . . . .

## ನನಗರಿಯದು-ನಿಮಗೆ



ಬೈ-ರಾಗಿಯು ಗಂಜಿಗಾಗುವದೇ?

ಜಪಾನಿನ ಇನ್ನೊಂದು ವಿಚಿತ್ರ ಪದ್ಧತಿಯೆಂದರೆ ಬಹಳ ದಾರಿದ್ರ್ಯದಲ್ಲಿರುವ ತಂದೆ-ತಾಯಿಗಳು ತಮ್ಮ ಮಕ್ಕಳನ್ನು ಮಾರಬಹುದು. ಆದರೆ ತಮ್ಮ ಹೆಮ್ಮಕ್ಕಳನ್ನು ಯಾರೂ ಚುಂಬಿಸದಂತೆ ಜಾಗರೂಕರಾಗಿರಬೇಕು "ಪ್ರೇಮಪ್ರಸಂಗ"ಗಳ ವಿಚಾರದಲ್ಲಿ ಸ್ವಾತಂತ್ರ್ಯವಿರಬೇಕೆಂದು ಪ್ರಚಾರಮಾಡಿದ ಅನೇಕ ಯುವಕರು ಇತ್ತೀಚೆಗೆ ಟೋಕಿಯೋದಲ್ಲಿ ಸೆರೆಹಿಡಿಯಲ್ಪಟ್ಟಿದ್ದಾರೆ.

. . . . .

ಒಟ್ಟಿನ ಮೇಲೆ ಸಾರ್ವಜನಿಕವಾಗಿ ಯಾರೂ ಸ್ತ್ರೀಯರನ್ನು ಮುದ್ದಿಡಬಾರದು. ಕಾರಣ-ಆಕೆಯು ಸೆರೆಮನೆಗೆಹೋಗಬೇಕಾಗಬಹುದು!

# ರಾಜನೀತಿಯಲ್ಲಿ ಪ್ರಚಾರದ ಸ್ಥಾನ.

೧೧ನೇ ಪುಟದಿಂದ

ಇನ್ನೂ ತಿಳಿದಿಲ್ಲ. ಸರ್ವಾಧಿಕಾರಿಗಳ ಸರಕಾರಗಳ ಅಭಿಪ್ರಾಯದಲ್ಲಿ ಪ್ರಜೆಗಳು ತಮ್ಮ ಸ್ವಂತ ರೀತಿಯಲ್ಲಿ ಸತ್ಯಾನ್ವೇಷಣ ಮಾಡುವುದು ಶುದ್ಧ ತಪ್ಪು. ಅವರ ದೃಷ್ಟಿಯಲ್ಲಿ ಸತ್ಯವೆಂದರೆ ಪ್ರಚಾರ ಮಂತ್ರಿಯು ತಯಾರಿಸಿದ ಒಂದು ವಿಚಾರ. ಅದು ಪ್ರಸಿದ್ಧಿಗೆ ಬರುವ ಮೊದಲು ಅದರಿಂದ ಸರ್ವಾಧಿಕಾರಿಗಳಿಗೆ ಪ್ರಯೋಜನವಿದೆಯೋ ಇಲ್ಲವೋ ಎಂಬುದು ಕೂಲಂಕಷವಾಗಿ ಚರ್ಚಿಸಲ್ಪಡುತ್ತದೆ. ಆ 'ಸತ್ಯ'ವನ್ನು ಪ್ರತಿಯೊಬ್ಬನೂ ನಂಬಲೇ ಬೇಕು. ಆದುದರಿಂದ ಸರ್ವಾಧಿಕಾರಿಗಳ ಸರಕಾರಗಳು ಅವರ ಹಿತಸಂಬಂಧಗಳಿಗೆ ಸೇರಿಬೀಳದ ಎಲ್ಲಾ ವಾರ್ತೆಗಳನ್ನೂ ಬಲಾತ್ಕಾರದಿಂದ ಮೂಲೆಪಾಲು ಮಾಡುತ್ತವೆ. ರಷ್ಯದಲ್ಲಿ ಸತ್ಯವೆಂದರೆ ಕಮ್ಯೂನಿಸ್ಟ್ ಪಕ್ಷದವರು ರಚಿಸುವ ಒಂದು ವಿಷಯ. ಜರ್ಮನಿಯಲ್ಲಿ ಅದು ನಾಝಿಗಳ ಭಾವನಾಸೃಷ್ಟಿ- ಇಟಲಿಯಲ್ಲಿ ಸತ್ಯವೆಂದರೆ ಫ್ಯಾಸಿಸ್ಟರ ಅಧಿಕಾರ. ಇವೆಲ್ಲಾ ರಾಷ್ಟ್ರಗಳಲ್ಲಿ ಸರಕಾರಗಳು ಧಾರ್ಮಿಕ ಗುರುಗಳಂತೆ ಪವಿತ್ರವಾಗಿರುವ ಸ್ಥಾನವನ್ನು ಪಡೆದಿವೆ. ಸಂಸ್ಥಾಪಿಸಲ್ಪಟ್ಟ 'ಸತ್ಯ'ಗಳಿಗೆ ಯಾರಾದರೂ ವಿರೋಧವಾಗಿ ನಡೆದರೆ ಅವರ ಪ್ರಾಣಕ್ಕೆ ಸಂಚಕಾರವೆಂದೇ ಹೇಳಬೇಕು.

## ನವೀನ ಸತ್ಯಗಳು!

ಆಧುನಿಕ ಐರೋಪ್ಯ ಸರ್ವಾಧಿಕಾರಿತ್ವದ ಬೆಂಗೋಲೆಂದರೆ ವ್ಯವಸ್ಥಿತ ಪ್ರಚಾರ ಕಾರ್ಯ. ಕೆಂಪು, ಕಪ್ಪು, ಬೂದು ಬಣ್ಣದಂಗಿಗಳು ಆ ವಿಚಿತ್ರ 'ಸತ್ಯ'ಗಳ ಚಿಹ್ನೆಗಳಾಗಿವೆ. ಸರ್ವಾಧಿಕಾರಿಗಳು ಕೊನೆಗೆ ತಮ್ಮ ಅಧಿಕಾರವನ್ನು ಕತ್ತಿಯ ಬಲದಿಂದಲೇ ನಡೆಸುವುದಿದ್ದರೂ ಅವರು ಜನತೆಯ ಕಣ್ಣಿಗೆ ಮಣ್ಣೆರಚಿ ತಮ್ಮ ಇಚ್ಛೆಯನ್ನು ಪೂರೈಸಲು ಆಶಿಸುತ್ತಾರೆ. ದೊಡ್ಡ ಕಾರಖಾನೆಗಳು ತಮ್ಮ ಸಾಮಾನುಗಳ ಜಾಹಿರಾತುಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದಂತೆ ಈ ಸರ್ವಾಧಿಕಾರೀ ಸರಕಾರಗಳು ಕೂಡಾ ಪ್ರಚಾರ ಕಾರ್ಯವನ್ನು ನಡೆಸುತ್ತವೆ. ಸರ್ವಾಧಿಕಾರಿಗಳ ಭರವಸೆಯೆಂದರೆ ಅದು ಎಂದೂ ಕಾರ್ಯರೂಪಕ್ಕೆ ಬಾರದಿರುವಂಥವುಗಳೆಂಬುದು ಸುಸ್ಪಷ್ಟ. ಆಧುನಿಕ ಸರ್ವಾಧಿಕಾರಿಗಳು ತಮ್ಮ ಪ್ರಚಾರದೊಂದಿಗೆ ಯಾರೂ ಸ್ಪರ್ಧಿಸದಂತೆ ನೋಡಿಕೊಳ್ಳುತ್ತಾರೆ. ಅಧಿಕಾರಕ್ಕೆ ಬಂದೊಡನೆ ಅವರೇ ಸಾಕ್ಷಾತ್ ದೇವರಾಗಿ ಪ್ರತಿಯೊಬ್ಬರೂ ಅವರಿಗೆ ಶಿರಮಣಿಯಬೇಕಾಗುತ್ತದೆ. ಇದೇ ಸರ್ವಾಧಿಕಾರಿಗಳು ಇತರರ ಮೇಲೆ ಅಧಿಕಾರ ನಡೆಸುವುದರ ರಹಸ್ಯವಾಗಿದೆ.

---

(೩೮ನೆ ಪುಟದಿಂದ)

ಆಗುವುದು. ಮತ್ತು ಮನೋವ್ಯಥೆಯು ಬಹಳ ಹೆಚ್ಚಿ ಮುಖದ ಕಳೆಯು ಕುಂದಿಹೋಗುವುದು. ಪ್ರಯಾಣದಲ್ಲಿ ನಾನಾ ಕಷ್ಟಗಳು ನಷ್ಟಗಳು ಒದಗಿ ಶತ್ರುಗಳಿಗೆ ಶರಣುಹೊಡೆಯಬೇಕಾದ ಪ್ರಸಂಗ ಬರುವುದು. ಪ್ರಿಯಜನರ ವಿಯೋಗವು ನಿಮ್ಮ ಮನೋವ್ಯಥೆಯನ್ನು ಮತ್ತಷ್ಟು ಹೆಚ್ಚಿಸುವುದು- ತಾ 6. 7. ಹೊರತಾಗಿ ಇತರ ಎಲ್ಲಾ ದಿನಗಳೂ ಅನಿಷ್ಟಕಾರಕಗಳಾಗಿವೆ—

**ಬಾಲಭಾಸ್ಕರ.**







# ಅಂತರಂಗದ ಎರಡನೆಯ ಸ್ಪರ್ಧೆ.

ನಾಲ್ಕಾಣೆಗಳಿಗೆ

**25/-**

ರೂಪಾಯಿಗಳನ್ನು

ಪಡೆಯಿರಿ!





## ಪ್ರಥಮ ಬಹುಮಾನ:- ರೂಪಾಯಿ ೨೫.

✓ ಈ ಸ್ಪರ್ಧೆಯ ಉತ್ತರವು ಅಂತರಂಗದ ಸಂಪಾದಕರ ಬಳಿ ಮೊಹರು ಮಾಡಿಡಲಾಗಿದೆ.

✓ ಅದಕ್ಕೆ ಪ್ರತಿ ಅಕ್ಷರವೂ ಸರಿಹೋಲುವ ಉತ್ತರಕ್ಕೆ ಪ್ರಥಮ ಬಹುಮಾನವೂ, ಒಂದು ಮತ್ತು ಎರಡು ತಪ್ಪಿರುವವುಗಳಿಗೆ ಎರಡು ಮತ್ತು ಮೂರನೆ ಬಹುಮಾನಗಳೂ ಗ್ರಂಥರೂಪದಲ್ಲಿ ಕೊಡಲ್ಪಡುವುವು.

✓ ಬಹುಮಾನಕ್ಕೆ ಯೋಗ್ಯವಾದ ಉತ್ತರಗಳು ಒಂದಕ್ಕಿಂತ ಹೆಚ್ಚಾದಲ್ಲಿ ಮೇಲ್ಕಂಡ ಬಹುಮಾನಗಳು ಎಲ್ಲರಿಗೂ ಸರಿಸಮಾನವಾಗಿ ಹಂಚಲ್ಪಡುವುವು.

✓ ಬಹುಮಾನವನ್ನು ಹಂಚುವ ವಿಚಾರ ಸ್ಪರ್ಧೆಯ ಮೆನೇಜರರಿಗೆ ಸೇರಿದೆ. ಈ ವಿಚಾರದಲ್ಲಿ ಯಾವ ಪತ್ರವ್ಯವಹಾರಗಳಿಗೂ ಅವಕಾಶವಿಲ್ಲ.

- **ಪ್ರತಿ ಉತ್ತರಕ್ಕೂ ಪ್ರವೇಶಧನ ನಾಲ್ಕಾಣೆ.**
- **ಒಬ್ಬನು ಎಷ್ಟೂ ಉತ್ತರಗಳನ್ನು ಕಳುಹಿಸ ಬಹುದು. (ಒಂದು ರೂಪಾಯಿಗೆ ಐದು ಉತ್ತರಗಳನ್ನು ಕಳುಹಿಸ ಬಹುದಾಗಿದೆ.)**
- ಪ್ರವೇಶ ಧನವನ್ನು ಪೋಸ್ಟಲ್ ಸ್ಟ್ಯಾಂಪು, ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಮನಿ ಆರ್ಡರ್ ಮೂಲಕ ರವಾನಿಸಬಹುದು.
- ಉತ್ತರವನ್ನು ಬರೆಯುವವರು ಜನವರಿ ೧೫ರೊಳಗೆ ಬರೆದು ಕಳುಹಿಸಬೇಕು. ನಂತರ ಈ ಸ್ಪರ್ಧೆಗಾಗಿ ಕಳುಹಿಸುವ ಉತ್ತರಗಳನ್ನು ಸ್ವೀಕರಿಸುವುದಿಲ್ಲ.
- ಸರಿಯಾದ ಉತ್ತರವನ್ನು ಜನವರಿ ೨೨ರ "ಅಂತರಂಗ" ದಲ್ಲಿ ಪ್ರಕಟಿಸಲಾಗುತ್ತದೆ.

**ಈ ಸ್ಪರ್ಧೆಯ ಉತ್ತರಗಳು ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು.**
**ಈ ಕೂಪನುಗಳು ದಶಂಬರ ತಿಂಗಳ ಸಂಚಿಕೆಗಳಲ್ಲಿ ಪ್ರಕಟಿಸಲ್ಪಡುತ್ತವೆ.**
**ಉತ್ತರ ಕೊಡುವವರು ತಮ್ಮ ಪೂರ್ಣ ವಿಳಾಸವನ್ನು ಬರೆಯತಕ್ಕದ್ದು.**

**ಮೆನೇಜರ್, ಅಂತರಂಗ ಸ್ಪರ್ಧೆ, ಉಡುಪಿ.**

Printed and published by P. Venkataramanacharya for and on behalf of SUPPLY AGENCY LTD.,
at Manipal Power Press, Udipi.

| ೧ | ೨ | ೩ |  | ೪ | ೫ | ೬ |
|---|---|---|---|---|---|---|
| ೭ |  |  | ೮ |  |  | ೯ |
| ೧೦ |  | ೧೧ | ೧೨ | ೧೩ |  | ೧೪ |
|  | ೧೫ | ೧೬ |  | ೧೭ | ೧೮ |  |
| ೧೯ |  | ೨೦ | ೨೧ | ೨೨ |  | ೨೩ |
| ೨೪ |  |  | ೨೫ |  |  | ೨೬ |
| ೨೭ | ೨೮ | ೨೯ |  | ೩೦ | ೩೧ | ೩೨ |

## ಅಂತರಂಗ ಸ್ಪರ್ಧೆ—ನಂ ೨

ಸ್ಪರ್ಧೆಯ ಉತ್ತರಗಳನ್ನು ಈ ಕೂಪನ್ನಿನಲ್ಲಿಯೇ ಬರೆದು ಕಳುಹಿಸಬೇಕು.

ಹೆಸರು . . . . . . . . . . . . . . . . . . . . .

ವಿಳಾಸ . . . . . . . . . . . . . . . . . . . . .

. . . . . . . . . . . . . . . . . . . .

ಸಹಿ . . . . . . . . . . . . . . . . . . . . .

ಉತ್ತರಗಳ ಸಂಖ್ಯೆ. . . . . . . . . . . . . . . . .

ಕಳುಹಿಸಿದ ಹಣವೆಷ್ಟು . . . . . . . . . . . . . . . .

**ಎಡದಿಂದ ಬಲಕ್ಕೆ:—**

೧ರಿಂದ ೩ . . . ನೇತ್ರೆಯರನ್ನು ಪುರುಷರು ಮೆಚ್ಚುತ್ತಾರೆ.

೪ ,, ೬ ಷಟ್ಪದಿಗಳಲ್ಲೊಂದು.

೧೧ ,, ೧೩ ಪಾಪಿಗಳು . . . ಕ್ಕೆ ಹೋಗುವರೆಂದು ಸಾಮಾನ್ಯ ಜನರ ನಂಬಿಗೆ.

೧೫ ,, ೧೬ ಯಶಸ್ಸು.

೧೭ ,, ೧೮ ಉಪ್ಪಿಗಿಂತ . . .ಇಲ್ಲ ತಾಯಿಗಿಂತ ಬಂಧುವಿಲ್ಲ.

೨೦ ,, ೨೨ ರೋಗಿಗಳು . . . . . ತ್ತಾರೆ.

೨೭ ,, ೨೯ ನಾಟಕದಲ್ಲಿ ಇದು ಮುಖ್ಯ.

೩೦ ,, ೩೨ ಜ್ಞಾನವುಂಟಾಗಬೇಕಾದರೆ ಬುದ್ಧಿ . . . .ವಾಗಬೇಕು.

**ಮೇಲಿನಿಂದ ಕೆಳಗೆ: –**

೧ರಿಂದ ೧೦ ಶರಧಿ.

೧೯ ,, ೨೭ ಕಾಯಿದೆ.

೮ ,, ೧೨ ಕೋಗಿಲೆಯ . . . ವು ಇಂಪೆಂದು ಕವಿಗಳು ವರ್ಣಿಸುತ್ತಾರೆ.

೧೧ ,, ೨೦ ಕರ್ನಾಟಕವು . . ಮನೋಹರವಾದ ನೈಸರ್ಗಿಕ ದೃಶ್ಯಗಳಿಂದ ಕೂಡಿದೆ.

೨೧ ,, ೨೫ ಸೂರ್ಯ.

೧೩ ,, ೨೨ ಇದು ಹೊಟ್ಟೆಯೊಳಗಿದೆ.

೬ ,, ೧೪ ಹೆಚ್ಚಿನವರು ಇವನ್ನು ಬೆದರುತ್ತಾರೆ.

೨೩ ,, ೩೨ ಜವಾಹರಲಾಲರು ಯುರೋಪಿನ . . . . ವನ್ನು ಮುಗಿಸಿ ಬಂದಿದ್ದಾರೆ.